KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – **IV-A** | ಬೆಂಗಳೂರು, ಸೋಮವಾರ, ಮಾರ್ಚ್ ೭, ೨೦೧೧ (ಫಾಲ್ಗುಣ ೧೬, ಶಕ ವರ್ಷ ೧೯೩೨) | ನಂ. ೨೭೭ |
|---|---|---|

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ:ವಿಪವಿ–03:2011, ಬೆಂಗಳೂರು, ದಿನಾಂಕ: 7ನೇ ಮಾರ್ಚ್, 2011**

ಈ ಮುಂದಿನ ವಿಧೇಯಕವನ್ನು ವಿಧಾನ ಪರಿಷತ್ತಿನಲ್ಲಿ ದಿನಾಂಕ: 7ನೇ ಮಾರ್ಚ್, 2011 ರಂದು ಮಂಡಿಸಲಾಯಿತು.

**ಕರ್ನಾಟಕ ವಿಧಾನ ಪರಿಷತ್ತು**

**ನೂರ ಹದಿನಾಲ್ಕನೇ ಅಧಿವೇಶನ**

**(ಮುಂದುವರೆದ ಉಪವೇಶನಗಳು)**

## ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ವಿಧೇಯಕ, 2011

**(2011ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 3)**

ರಾಜ್ಯ ಸರ್ಕಾರ ಮತ್ತು ವೃತ್ತಿ ಶಿಕ್ಷಣ ಕೋರ್ಸುಗಳ ಶಿಕ್ಷಣ ನೀಡುತ್ತಿರುವ ಅನುದಾನಿತವಲ್ಲದ ಖಾಸಗಿ ಶಿಕ್ಷಣ ಸಂಸ್ಥೆಗಳ ನಡುವೆ ಮಾಡಿಕೊಳ್ಳಲಾದ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಮಾನ್ಯತೆ ನೀಡುವುದಕ್ಕಾಗಿ ಮತ್ತು 2005 (6) ಎಸ್‌ಸಿಸಿ 537 ರಲ್ಲಿ ವರದಿಯಾದ ಪಿ.ಎ. ಇನಾಂದಾರ್ ಮತ್ತು ಇತರರು –ವಿರುದ್ಧ–ಮಹಾರಾಷ್ಟ್ರ ರಾಜ್ಯ– ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಉಪಬಂಧಿಸಲಾದಂಥ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಮತ್ತು ರಾಜ್ಯ ಸರ್ಕಾರವು, ಕರ್ನಾಟಕ ನಿವಾಸಿ ವಿದ್ಯಾರ್ಥಿಗಳ ಮತ್ತು ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಹಿತರಕ್ಷಣೆಗಾಗಿ 2008–09, 2009–10, 2010–11 ವರ್ಷದಲ್ಲಿ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳೊಡನೆ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಂಡಿರುವುದರಿಂದ ಮತ್ತು 2011–12ನೇ ವರ್ಷದಲ್ಲಿ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಳ್ಳಲು ಉದ್ದೇಶಿಸಿರುವುದರಿಂದ ಮತ್ತು 2008–09, 2009–10, 2010–11 ಮತ್ತು 2011–12ನೇ ಶೈಕ್ಷಣಿಕ ವರ್ಷಗಳಿಗಾಗಿ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ನ್ನು (2006ರ ಕರ್ನಾಟಕ ಅಧಿನಿಯಮ 8) ತಡೆಹಿಡಿಯಬೇಕೆಂದು ಅಭಿಪ್ರಾಯ ಪಟ್ಟಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು, ಪ್ರಾರಂಭ ಮತ್ತು ಅನ್ವಯ.–** (1) ಈ ಅಧಿನಿಯಮವನ್ನು ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು 2008ರ ಜೂನ್ 1ನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

(3) ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ರಲ್ಲಿ (2006ರ ಕರ್ನಾಟಕ ಅಧಿನಿಯಮ 8) ಏನೇ ಒಳಗೊಂಡಿದ್ದರೂ 2008–09, 2009–10, 2010–11 ಮತ್ತು 2011–12ನೇ ಶೈಕ್ಷಣಿಕ ವರ್ಷಕ್ಕಾಗಿ ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಪ್ರವೇಶಗಳು ಮತ್ತು ಶುಲ್ಕ ನಿಗದಿ ಈ ಅಧಿನಿಯಮದ ಉಪಬಂಧಗಳ ಅನುಸಾರವಾಗಿ ನಡೆಯತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭಕ್ಕೆ ಅನ್ಯಥಾ ಅಗತ್ಯವಿದ್ದ ಹೊರತು,–

(ಎ) "ಸಾಮಾನ್ಯ ಪ್ರವೇಶ ಪರೀಕ್ಷೆ" ಎಂದರೆ, ಏಕಗವಾಕ್ಷಿ ಪ್ರಕ್ರಿಯೆಯ ಮೂಲಕ ವೃತ್ತಿ ಶಿಕ್ಷಣ ವ್ಯಾಸಂಗ ಕ್ರಮಗಳಿಗೆ ಪ್ರವೇಶ ನೀಡುವ ಉದ್ದೇಶಕ್ಕಾಗಿ ಅಭ್ಯರ್ಥಿಗಳ ಅರ್ಹತೆ (ಮೆರಿಟ್) ಯನ್ನು ನಿರ್ಧರಿಸುವುದಕ್ಕಾಗಿ ನಡೆಸಲಾಗುವ ಪರೀಕ್ಷೆ ಮತ್ತು ತರುವಾಯದ ಕೇಂದ್ರೀಯ ಕೌನ್ಸೆಲಿಂಗ್ ವ್ಯವಸ್ಥೆ;

(ಬಿ) "ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕ" ಎಂದರೆ, ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸುವ ರಾಜ್ಯ ಸರ್ಕಾರದ ಒಂದು ಏಜನ್ಸಿ;

(ಸಿ) "ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ" ಎಂದರೆ, ವೃತ್ತಿ ಶಿಕ್ಷಣ ಕೋರ್ಸುಗಳಿಗೆ ಪ್ರವೇಶ ಮತ್ತು ಶುಲ್ಕನಿಗದಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರ ಮತ್ತು ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘ ತಮ್ಮ ನಡುವೆ ಮಾಡಿಕೊಳ್ಳಬಹುದಾದ ಯಾವುದೇ ಒಪ್ಪಂದ;

(ಡಿ) "ಸಂಸ್ಥೆ" ಎಂದರೆ, ವೃತ್ತಿ ಶಿಕ್ಷಣ ಕೋರ್ಸ್‌ಗಳ ವಿದ್ಯಾಭ್ಯಾಸ ನೀಡುತ್ತಿರುವ ವೃತ್ತಿ ಶಿಕ್ಷಣ ಸಂಸ್ಥೆಗಳು;

(ಇ) "ಏಕ ಸದಸ್ಯ ನಿಯಂತ್ರಕ ಸಮಿತಿ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರವು ರಚಿಸಿದ ಸಮಿತಿ;

(ಎಫ್) "ವೃತ್ತಿ ಶಿಕ್ಷಣ ಕೋರ್ಸುಗಳು" ಎಂದರೆ,–

(I) ವೈದ್ಯಕೀಯ ಮತ್ತು ದಂತ ವೈದ್ಯ ಶಿಕ್ಷಣ ಸಂಸ್ಥೆಗಳಲ್ಲಿ,

(ಎ) ಬ್ಯಾಚುಲರ್ ಆಫ್ ಮೆಡಿಸಿನ್ ಮತ್ತು ಬ್ಯಾಚುಲರ್ ಆಫ್ ಸರ್ಜರಿ; ಮತ್ತು

(ಬಿ) ಬ್ಯಾಚುಲರ್ ಆಫ್ ಡೆಂಟಲ್ ಸರ್ಜರಿ

(II) ಇಂಜಿನಿಯರ್ ಸಂಸ್ಥೆಗಳಲ್ಲಿ,

(ಎ) ಬ್ಯಾಚುಲರ್ ಆಫ್ ಇಂಜಿನಿಯರಿಂಗ್;

(ಬಿ) ಬ್ಯಾಚುಲರ್ ಆಫ್ ಟೆಕ್ನಾಲಜಿ

(ಸಿ) ಬ್ಯಾಚುಲರ್ ಆಫ್ ಆರ್ಕಿಟೆಕ್ಚರ್;

(III) ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ಇತರ ಕೋರ್ಸುಗಳು.

(ಜಿ) "ಅನುದಾನಿತವಲ್ಲದ ಸಂಸ್ಥೆ" ಎಂದರೆ, ರಾಜ್ಯ ಸರ್ಕಾರದಿಂದ ಯಾವುದೇ ಅನುದಾನವನ್ನು ಅಥವಾ ಸಹಾಯಾನುದಾನವನ್ನು ಸ್ವೀಕರಿಸದ ಯಾವುದೇ ಖಾಸಗಿ ಆಡಳಿತವುಳ್ಳ ವೃತ್ತಿಶಿಕ್ಷಣ ಸಂಸ್ಥೆ.

**3. ಏಕ ಸದಸ್ಯ ನಿಯಂತ್ರಕ ಸಮಿತಿಯ ರಚನೆ.–** ರಾಜ್ಯದ ಯಾವುದೇ ವಿಶ್ವವಿದ್ಯಾಲಯದ ಮಾಜಿ ಕುಲಪತಿಯವರು ಸದಸ್ಯರಾಗಿರುವ, ರಾಜ್ಯ ಸರ್ಕಾರವು ನೇಮಿಸಿದ ಒಂದು ಏಕ ಸದಸ್ಯ ನಿಯಂತ್ರಕ ಸಮಿತಿಯು ಇರತಕ್ಕದ್ದು. ಸದರಿ ಏಕಸದಸ್ಯ ನಿಯಂತ್ರಕ ಸಮಿತಿಯು, ವೃತ್ತಿಶಿಕ್ಷಣ ಕೋರ್ಸುಗಳಿಗೆ ಪ್ರವೇಶದ ಮತ್ತು ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದದ ಅನುಷ್ಠಾನದ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**4. ಶುಲ್ಕದ ನಿಗದಿ.–** ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಜಾರಿಯಲ್ಲಿರುವ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಬಂಧದಲ್ಲಿ ನಿಗದಿಪಡಿಸಿದ ಶುಲ್ಕ ಏನೇ ಇದ್ದರೂ, ರಾಜ್ಯ ಸರ್ಕಾರವು, ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದ ಅನುಸಾರವಾಗಿ, ಅಧಿಸೂಚನೆಯ ಮೂಲಕ, ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಪ್ರವೇಶಕ್ಕೆ ಸಂದಾಯಮಾಡಬೇಕಾದ ಶುಲ್ಕವನ್ನು ನಿಗದಿಗೊಳಿಸಬಹುದು. ಬೇರೆ ಬೇರೆ ಪ್ರವರ್ಗದ ವಿದ್ಯಾರ್ಥಿಗಳಿಗೆ ಬೇರೆ ಬೇರೆ ಶುಲ್ಕದ ದರವನ್ನು ನಿಗದಿಗೊಳಿಸಬಹುದು.

**5. ಪ್ರವೇಶ ನಿಯಂತ್ರಣ ಮತ್ತು ಸೀಟು ಹಂಚಿಕೆ ಪ್ರಮಾಣ.–** ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕಾಗಿ, ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಸೀಟುಗಳನ್ನು ಈ ಮುಂದಿನ ರೀತಿಯಲ್ಲಿ ಭರ್ತಿ ಮಾಡತಕ್ಕದ್ದು, ಎಂದರೆ:–

(I) (i) 2008–09ನೇ ಶೈಕ್ಷಣಿಕ ವರ್ಷಕ್ಕಾಗಿ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ,–

(ಎ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡ ಐವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಬಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಸಿ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‍ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಡಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‍ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಇ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ದಂತವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಮೂವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(ಎಫ್) ಅಲ್ಪ ಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ದಂತ ವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(ii) 2009-10ನೇ ಶೈಕ್ಷಣಿಕ ವರ್ಷಕ್ಕಾಗಿ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ,-

(ಎ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‍ಗಳಲ್ಲಿ ಒಟ್ಟು ಸೀಟುಗಳ ಶೇಕಡ ಐವತ್ತರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಬಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‍ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಸಿ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‍ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತೆರಡರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಡಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‍ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೇಳರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಇ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ದಂತವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಮೂವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(ಎಫ್) ಅಲ್ಪ ಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ದಂತ ವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(iii) 2010-11ನೇ ಶೈಕ್ಷಣಿಕ ವರ್ಷಕ್ಕಾಗಿ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ,-

(ಎ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‍ಗಳಲ್ಲಿ ಒಟ್ಟು ಸೀಟುಗಳ ಶೇಕಡ ಐವತ್ತರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಬಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‍ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಸಿ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‍ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತೆರಡರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಡಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‍ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೇಳರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಇ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ದಂತವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಮೂವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(ಎಫ್) ಅಲ್ಪ ಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ದಂತ ವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(ಜಿ) ಅಲ್ಪಸಂಖ್ಯಾತರ ಮತ್ತು ಅಲ್ಪ ಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(iv) 2011-12ನೇ ವರ್ಷಕ್ಕೆ, ಸರ್ಕಾರವು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದಡಿಯಲ್ಲಿ ಒಪ್ಪಬಹುದಾದಂಥ ಸಂಖ್ಯೆಯ ಸೀಟುಗಳನ್ನು;

– ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಸರ್ಕಾರಿ ಸೀಟುಗಳಿಗೆ ಪ್ರವೇಶಕ್ಕಾಗಿ ವಿದ್ಯಾರ್ಥಿಗಳ ಆಯ್ಕೆ ನಿಯಮಗಳು, 2006ಕ್ಕೆ ಅನುಸಾರವಾಗಿ ಸರ್ಕಾರಿ ಸಾಮಾನ್ಯ ಪ್ರವೇಶ ಪರೀಕ್ಷೆ ಘಟಕದ ಮೂಲಕ ತುಂಬತಕ್ಕದ್ದು.

(II) ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದಲ್ಲಿ ಅನ್ಯಥಾ ನಿರ್ದಿಷ್ಟಪಡಿಸಿದ ಹೊರತು, ಉಳಿದ ಸೀಟುಗಳನ್ನು ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ನಿರ್ಧರಿಸಲಾದ ಅರ್ಹತೆಯ ಆಧಾರದ ಮೇಲೆ ನ್ಯಾಯಯುತ ಹಾಗೂ ಪಾರದರ್ಶಕ ರೀತಿಯಲ್ಲಿ ಸಂದರ್ಭಾನುಸಾರ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘ ಅಥವಾ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರ ಸಂಸ್ಥೆಗಳ ಸಂಘ ನಡೆಸಿದ ಸಾಮಾನ್ಯ ಪ್ರವೇಶ ಪರೀಕ್ಷೆ ಹಾಗೂ ತರುವಾಯ ನಡೆಸಲಾಗುವ ಕೇಂದ್ರೀಯ ಕೌನ್ಸಿಲಿಂಗ್ ಮೂಲಕ ತುಂಬತಕ್ಕದ್ದು.

(2) ರಾಜ್ಯಸರ್ಕಾರದ ಮೀಸಲಾತಿ ನೀತಿ ಮತ್ತು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಒಳಪಟ್ಟು, ರಾಜ್ಯ ಸರ್ಕಾರವು ವಿವಿಧ ಪ್ರವರ್ಗದ ಸಂಸ್ಥೆಗಳ ಸಂಬಂಧದಲ್ಲಿ ವಿವಿಧ ಪ್ರವರ್ಗದ ವಿದ್ಯಾರ್ಥಿಗಳನ್ನು ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕದವರು ಹಾಗೂ ಆಡಳಿತ ಮಂಡಳಿಯವರು ತುಂಬಬೇಕಾದ ಸೀಟುಗಳ ಹಂಚಿಕೆ ಪ್ರಮಾಣವನ್ನು ಅಧಿಸೂಚನೆಯ ಮೂಲಕ ಪ್ರಕಟಿಸಬಹುದು.

**6. ಈ ಅಧಿನಿಯಮವನ್ನು ಉಲ್ಲಂಘಿಸಿ ಮಾಡಿದ ಪ್ರವೇಶಗಳು ಅಸಿಂಧುವಾಗಿರುವುದು.–** ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದವನ್ನು ಉಲ್ಲಂಘಿಸಿ ಯಾವುವೇ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳು 2008–09, 2009–10, 2010–11 ಮತ್ತು 2011–12ನೇ ಶೈಕ್ಷಣಿಕ ವರ್ಷಕ್ಕಾಗಿ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಅಥವಾ ತರುವಾಯ ಮಾಡಿದ ಎಲ್ಲ ಪ್ರವೇಶಗಳು ಅಸಿಂಧುವಾಗಿರತಕ್ಕದ್ದು. ಅಂಥ ಉಲ್ಲಂಘನೆಯ ಸಂಬಂಧದಲ್ಲಿ ರಾಜ್ಯ ಸರ್ಕಾರವು ಅಂಥ ಪ್ರವೇಶಗಳನ್ನು ಅಥವಾ ಸಂದರ್ಭಾನುಸಾರ ಅಂಥ ಸಂಸ್ಥೆಯ ಸಂಯೋಜನೆಯನ್ನು ರದ್ದುಪಡಿಸುವುದಕ್ಕೆ ಸಂಬಂಧಪಟ್ಟ ವಿಶ್ವವಿದ್ಯಾಲಯಕ್ಕೆ ನಿರ್ದೇಶಿಸಬಹುದು.

**7. ತೊಂದರೆಗಳನ್ನು ನಿವಾರಿಸುವ ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದಲ್ಲಿ, ರಾಜ್ಯಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ತೊಂದರೆಗಳನ್ನು ನಿವಾರಿಸಲು ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ ಮತ್ತು ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು.

**8. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಪೂರ್ವಾನ್ವಯವಾಗಿ ಅಥವಾ ಉತ್ತರಾನ್ವಯವಾಗಿ, ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳವರೆಗೆ ಅಧಿವೇಶನದಲ್ಲಿರುವಾಗ, ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು, ವಿಧಾನಮಂಡಲದ ಉಭಯಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಟುಮಾಡಬೇಕೆಂದು ಒಪ್ಪಿದರೆ ಅಥವಾ ನಿಯಮವನ್ನು ರಚಿಸಬಾರದೆಂದು ತೀರ್ಮಾನಿಸಿದರೆ, ಆ ತರುವಾಯ ಅಂಥ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವಾಗತಕ್ಕದ್ದಲ್ಲ.

**9. ಪ್ರವೇಶಗಳು ಮತ್ತು ಶುಲ್ಕದ ಸಂಗ್ರಹಣೆಯ ಸಿಂಧುತ್ವ ಇತ್ಯಾದಿ.–** ಯಾವುದೇ ನ್ಯಾಯಾಲಯ, ನ್ಯಾಯಾಧೀಕರಣ ಅಥವಾ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶದಲ್ಲಿ ಇದಕ್ಕೆ ವಿರುದ್ಧವಾದುದು ಏನೇ ಇದ್ದರೂ, ವೃತ್ತಿ ಶಿಕ್ಷಣ ಸಂಸ್ಥೆಗಳು ಅಥವಾ ರಾಜ್ಯ ಸರ್ಕಾರವು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಅಥವಾ ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ 2008ರ ಜೂನ್ 1ನೇ ದಿನಾಂಕದಿಂದ ಜಾರಿಗೆ ಬರುವಂತೆ ಮಾಡಿದ ಅಥವಾ ಮಾಡಲಾಗಿದೆ ಎಂದು ಭಾವಿಸಲಾದ ಎಲ್ಲಾ ಪ್ರವೇಶಗಳು ಅಥವಾ ಸಂಗ್ರಹಿಸಿದ ಶುಲ್ಕವನ್ನು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಅಂಥ ಪ್ರವೇಶಗಳನ್ನು ಅಥವಾ ಶುಲ್ಕದ ಸಂಗ್ರಹಣೆಯನ್ನು ಮಾಡಲಾಗಿದ್ದರೆ, ಹೇಗೋ ಹಾಗೆ ಸಿಂಧುವಾಗಿರತಕ್ಕದ್ದು.

(ಎ) ವೃತ್ತಿ ಶಿಕ್ಷಣ ಸಂಸ್ಥೆಗಳಿಂದ ಅಥವಾ ಪ್ರವೇಶಗಳು ಮತ್ತು ಶುಲ್ಕಗಳ ಸಂಗ್ರಹಣೆಯ ಸಂಬಂಧದಲ್ಲಿ ರಾಜ್ಯ ಸರ್ಕಾರವು ಕೈಗೊಂಡ ಅಥವಾ ನಡೆಸಿದ ಎಲ್ಲ ಕ್ರಮಗಳು, ವ್ಯವಹರಣೆಗಳು ಅಥವಾ ಕಾರ್ಯಗಳನ್ನು, ಕಾನೂನಿನ ಪ್ರಕಾರ ಕೈಗೊಳ್ಳಲಾಗಿದೆ ಮತ್ತು ನಡೆಸಲಾಗಿದೆ ಎಂದು ಮತ್ತು ಯಾವಾಗಲೂ ಹಾಗೆ ಕೈಗೊಳ್ಳಲಾಗಿದೆ ಅಥವಾ ನಡೆಸಲಾಗಿದೆ ಎಂದು ಭಾವಿಸತಕ್ಕದ್ದು.

(ಬಿ) ಅಂಥ ಯಾವುದೇ ಶುಲ್ಕದ ಮರುಪಾವತಿಗಾಗಿ ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧಿಕರಣ ಅಥವಾ ಯಾವುದೇ ಪ್ರಾಧಿಕಾರದ ಮುಂದೆ ಯಾವುದೇ ದಾವೆ ಅಥವಾ ಇತರ ವ್ಯವಹರಣೆಗಳನ್ನು ನಡೆಸತಕ್ಕದ್ದಲ್ಲ ಅಥವಾ ಮುಂದುವರಿಸತಕ್ಕದ್ದಲ್ಲ; ಮತ್ತು

(ಸಿ) ಯಾವುದೇ ಅಂಥ ಶುಲ್ಕದ ಮರುಪಾವತಿಗೆ ನಿರ್ದೇಶಿಸಿ ಯಾವ ನ್ಯಾಯಾಲಯವೂ ಯಾವುದೇ ಡಿಕ್ರಿ ಅಥವಾ ಆದೇಶವನ್ನು ಜಾರಿ ಮಾಡತಕ್ಕದ್ದಲ್ಲ.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ರಾಜ್ಯ ಸರ್ಕಾರ ಮತ್ತು ವೃತ್ತಿ ಶಿಕ್ಷಣ ಕೋರ್ಸುಗಳ ಶಿಕ್ಷಣ ನೀಡುತ್ತಿರುವ ಅನುದಾನಿತವಲ್ಲದ ಖಾಸಗಿ ಶಿಕ್ಷಣ ಸಂಸ್ಥೆಗಳ ನಡುವೆ ಮಾಡಿಕೊಳ್ಳಲಾದ ಸಮ್ಮತಾಭಿಪ್ರಾಯದ ಒಪ್ಪಂದಕ್ಕೆ ಮಾನ್ಯತೆ ನೀಡುವುದಕ್ಕಾಗಿ ಮತ್ತು 2005 (6) ಎಸ್‌ಸಿಸಿ 537 ರಲ್ಲಿ ವರದಿಯಾದ ಪಿ.ಎ. ಇನಾಂದಾರ್ ಮತ್ತು ಇತರರು–ವಿರುದ್ಧ–ಮಹಾರಾಷ್ಟ್ರ ರಾಜ್ಯ – ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಉಪಬಂಧಿಸಲಾದಂಥ ಇತರ ವಿಷಯಗಳಿಗೆ ಉಪಬಂಧಕಲ್ಪಿಸುವುದಕ್ಕಾಗಿ ಒಂದು ವಿಧೇಯಕ.

ರಾಜ್ಯ ಸರ್ಕಾರವು ಕರ್ನಾಟಕ ನಿವಾಸಿ ವಿದ್ಯಾರ್ಥಿಗಳ ಮತ್ತು ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳ ಹಿತರಕ್ಷಣೆಗಾಗಿ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳೊಡನೆ 2008–09, 2009–10, 2010–11ನೇ ಶೈಕ್ಷಣಿಕ ವರ್ಷಗಳಿಗೆ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಂಡಿರುವ ಹಿನ್ನೆಲೆಯಲ್ಲಿ ಮತ್ತು 2011–12ನೇ ಶೈಕ್ಷಣಿಕ ವರ್ಷಕ್ಕಾಗಿ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದವನ್ನು ಮಾಡಿಕೊಳ್ಳಲು ಉದ್ದೇಶಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ನ್ನು 2008–09, 2009–10, 2010–11 ಮತ್ತು 2011–12ನೇ ಶೈಕ್ಷಣಿಕ ವರ್ಷಗಳಿಗಾಗಿ ತಡೆಹಿಡಿಯುವುದು ಅವಶ್ಯವೆಂದು ಅಭಿಪ್ರಾಯಪಡಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತು ಜ್ಞಾಪನ ಪತ್ರ**

**ಖಂಡ–8** ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ಪೂರ್ವಾನ್ವಯವಾಗಿ ಅಥವಾ ಉತ್ತರಾನ್ವಯವಾಗಿ ಪೂರ್ವ ಪ್ರಕಟಣೆಯ ತರುವಾಯ, ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಡಾ. ವಿ.ಎಸ್. ಆಚಾರ್ಯ**
ಉನ್ನತ ಶಿಕ್ಷಣ, ಯೋಜನೆ ಮತ್ತು ಸಾಂಖ್ಯಿಕ,
ಮುಜರಾಯಿ, ಮಾಹಿತಿ ತಂತ್ರಜ್ಞಾನ ಮತ್ತು
ಜೈವಿಕ ತಂತ್ರಜ್ಞಾನ ಸಚಿವರು

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

## KARNATAKA LEGISLATIVE COUNCIL
### HUNDRED AND FOURTEENTH SESSION
### (ADJOURNED MEETINGS)

## THE KARNATAKA PROFESSIONAL EDUCATIONAL INSTITUTIONS (REGULATION OF ADMISSION AND FIXATION OF FEE) (SPECIAL PROVISIONS) BILL, 2011

### (L.C. Bill No. 03 of 2011)

A Bill to provide for recognition of the consensual arrangement or agreement entered into between the State Government and the Private Unaided Educational Institutions imparting Professional Educational Courses and for other matters, as provided in the judgment of the Supreme Court of India in P.A. Inamdar and others Vs. State of Maharashtra reported in 2005(6) SCC 537.

Whereas the State Government, to protect the interest of the students of Karnataka domicile and students belonging to educationally and socially backward classes, have entered into a consensual arrangement or agreement with the Private Unaided Professional Educational Institutions for the years 2008-09, 2009-10, 2010-11 and has proposed to enter into a consensual arrangement or agreement for the year 2011-2012 and felt that the Karnataka Professional Educational Institutions (Regulation of Admission and Determination of Fee) Act, 2006 (Karnataka Act 8 of 2006) be kept in abeyance for the academic years 2008-09, 2009-10, 2010-11 and 2011-12 and for the purposes hereinafter appearing;

Be it enacted by the Karnataka State Legislature in the sixty second year of the Republic of India, as follows:-

**1. Short title, commencement and application.-** (1) This Act may be called the Karnataka Professional Educational Institutions (Regulation of Admission and Fixation of Fee) (Special Provisions) Act, 2011.

(2) It shall be deemed to have come into force with effect from 1st day of June, 2008.

(3) Notwithstanding anything contained in the Karnataka Professional Educational Institutions (Regulation of Admission and Determination of Fee) Act, 2006 (Karnataka Act 8 of 2006), admissions and fixation of fee in an un-aided Private Professional Educational Institution for the academic years 2008-09, 2009-10, 2010-11 and 2011-12 shall be governed by the provisions of this Act.

**2. Definitions.-**In this Act, unless the context otherwise requires,-

(a) "Common Entrance Test" means the entrance test conducted for determination of merit of the candidates followed by centralized counseling for the purpose of admission to professional educational courses through a single window procedure;

(b) "Common Entrance Test Cell" means the agency of the State Government which conducts the common entrance test;

(c) "Consensual arrangement or agreement" means any agreement that may be entered into between the State Government and association of unaided Private Professional Educational Institutions relating to admission and fixation of fee in professional courses;

(d) "Institution" means Professional Educational Institutions offering Professional Educational courses;

(e) "One Man Regulatory Committee" means the Committee constituted by the State Government under section 3;

(f) "Professional Educational Courses" means,-

(I) In Medical and Dental Institutions,-

(a) Bachelor of Medicine and Bachelor of Surgery; and
(b) Bachelor of Dental Surgery.

(II) In Engineering Institutions,

(a) Bachelor of Engineering;

(b) Bachelor of Technology;

(c) Bachelor of Architecture; and

(III) such other courses as may be notified by the State Government

(g) "Unaided institution" means any privately managed professional educational institution, which is not receiving aid or grant-in-aid from the State Government.

**3. Constitution of One Man Regulatory Committee.-**There shall be a One-Man Regulatory Committee appointed by the State Government, who shall be a former Vice-Chancellor of any University in the State. The said One-Man Regulatory Committee shall oversee the admission to professional courses and the implementation of the consensual arrangement or agreement.

**4. Fixation of fee.-** Notwithstanding the fee fixed in respect of Professional Educational Institutions which are in force on the date of commencement of this Act, the State Government may, in accordance with the consensual arrangement or agreement, by notification, fix the fee payable for admission to the Unaided Private Professional Educational Institutions. Different rates of fees may be fixed for different categories of students.

**5. Regulation of admission and seat matrix. -**(1) For effective implementation of the consensual arrangement or agreement, seats in a Private Unaided Professional Educational Institution shall be filled in the following manner, namely:-

(I) (i) Out of the total intake of seats for the academic year 2008-09,-

(a) in non-minority institution offering Engineering courses not less than, fifty five percent of total seats;

(b) in minority institution offering Engineering courses not less than forty five percent of total seats;

(c) in non-minority institution offering Medical courses not less than forty percent of total seats;

(d) in minority institution offering Medical courses not less than twenty five percent of total seats;

(e) in non-minority institution offering Dental courses not less than thirty five percent of total seats;

(f) in minority institution offering Dental courses not less than twenty five percent of total seats;

(ii) Out of the total intake of seats for the academic year 2009-10,-

(a) in non-minority institution offering Engineering courses not less than, fifty percent of total seats;

(b) in minority institution offering Engineering courses not less than forty five percent of total seats;

(c) in non-minority institution offering Medical courses not less than forty two percent of total seats;

(d) in minority institution offering Medical courses not less than twenty seven percent of total seats;

(e) in non-minority institution offering Dental courses not less than thirty five percent of total seats;

(f) in minority institution offering Dental courses not less than twenty five percent of total seats;

(iii) Out of the total intake of seats for the academic year 2010-11,-

(a) in non-minority institution offering Engineering courses not less than, fifty percent of total seats;

(b) in minority institution offering Engineering courses not less than forty percent of total seats;

(c) in non-minority institution offering Medical courses not less than forty two percent of total seats;

(d) in minority institution offering Medical courses not less than twenty seven percent of total seats;

(e) in non-minority institution offering Dental courses not less than thirty five percent of total seats;

(f) in minority institution offering Dental courses not less than twenty five percent of total seats;

(g) in minority and non-minority institutions offering Indian System of medicine and Homeopathy not less than twenty percent of total seats;

(iv) for the year 2011-12 such number of seats as may be agreed to by the Government under the consensual arrangement or agreement;

shall be filled through the Common Entrance Test Cell in accordance with the Karnataka Selection of Candidates for Admission to Government seats in Professional Educational Institutions Rules, 2006.

(II) The remaining seats shall be filled through the Common Entrance Test conducted by the association of Private Professional Educational Institutions or the association of religious and linguistic minority institutions, as the case may be followed by centralized counseling, in a fair and transparent manner on the basis of merit determined subject to such rules as may be prescribed except otherwise specified in the consensual arrangement or agreement.

(2) Subject to reservation policy of the State Government and the consensual arrangement or agreement, the State Government may, by notification, publish the seat matrix to be filled by the Common Entrance Test Cell and the management, by different categories of students in respect of different categories of institutions.

**6. Invalidation of admissions made in violation of this Act.-**All admissions made in violation of the provisions of this Act or the consensual arrangement or agreement by any Private Unaided Professional Educational Institutions for the academic years 2008-09, 2009-10,2010-11 and 2011-12 whether made before or after commencement of this Act shall be invalid. In case of such violation, the State Government may direct the concerned university to cancel such admissions or affiliation of such institution as the case may be.

**7. Power to remove difficulties.-**If any difficulty arises in giving effect to the provisions of this Act, the State Government may, by order published in the official Gazette, make provisions not inconsistent with the provisions of this Act as appear it to be necessary or expedient for removing the difficulty.

**8. Power to make rules.-** (1) The State Government may, by notification, in the official Gazette, make rules prospectively or retrospectively for carrying out the purposes of this Act.

(2) Every rule made under this Act shall be laid as soon as may be after it is made before each House of the State Legislature while it is in session for a total period of thirty days which may be comprised in one session or in two or more successive sessions, and if, before the expiry of the session immediately following the session or the successive sessions aforesaid, both Houses agree in making any modification in the rule or both Houses agree that the rule should not be made, the rule shall thereafter have effect only in such modified form or be of no effect, as the case may be, so however, that any such modification or annulment shall be without prejudice to the validity of anything previously done under that rule.

**9. Validation of admissions and collection of fee.-** Notwithstanding anything contained in any judgement, decree or order of any Court, Tribunal or other authority to the contrary, all admissions made or purporting to have been made or the fee collected with effect from the 1st day of June, 2008 in accordance with the consensual arrangement or agreement or the provisions of this Act by the Professional Educational Institutions or the State Government shall be and shall be deemed to be valid and effective as if such admission or collection of fee had been done or made under the provisions of this Act,-

(a) all acts, proceedings or things done or taken by the Professional Educational Institutions or by the State Government in connection with the admissions and collection of fee be deemed to be, and to have always been done or taken in accordance with law;

(b) no suit or other proceedings shall be maintained or continued in any Court or Tribunal or authority for the refund of any such fee;

(c) no Court shall enforce any decree or order directing the refund of any such fee.

## STATEMENT OF OBJECTS AND REASONS

A Bill to provide for recognition of the consensual agreement entered into between the State Government and the Private Unaided Educational Institutions imparting Professional Educational Courses and for other matters, as provided in the judgment of the Supreme Court of India in P.A. Inamdar and others Vs. State of Maharashtra reported in 2005(6) SCC 537.

Whereas the State Government, to protect the interest of the students of Karnataka domicile and students belonging to educationally and socially backward classes, for the academic year 2008-09, 2009-10, and 2010-11 have entered into such consensual arrangement or agreement and has proposed to enter in to consensual arrangement or agreement for the year 2011-12 with the Private Unaided Professional Educational Institutions and felt necessary that the Karnataka Professional Educational Institutions (Regulation of Admission and Determination of Fee) Act, 2006 be kept in abeyance for the academic years 2008-09, 2009-10, 2010-11 and 2011-12.

Hence, the Bill.

## FINANCIAL MEMORANDUM

There is no extra expenditure involved in the proposed legislative measure.

## MEMORANDUM REGARDING DELEGATED LEGISLATION

Clause 8: Sub clause (1) empowers the state Government to make rules after previous publication prospectively or retrospectively to carry out of the purposes of the Act.

The above delegation of Legislative power is normal in character.

**Dr. V.S. ACHARYA**
Minister for Higher Education, Planning
and Statistics, Muzarai, Information
Technology & Bio-Technology

**V. SHREESH**
Secretary
Karnataka Legislative Council

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೭, ೨೦೧೧ (ಫಾಲ್ಗುಣ ೧೬, ಶಕ ವರ್ಷ ೧೯೩೨) | ನಂ. ೨೭೮ |
|---|---|---|

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ:ವಿಪವಿ–04:2011, ಬೆಂಗಳೂರು, ದಿನಾಂಕ: 7ನೇ ಮಾರ್ಚ್, 2011**

ಈ ಮುಂದಿನ ವಿಧೇಯಕವನ್ನು ವಿಧಾನ ಪರಿಷತ್ತಿನಲ್ಲಿ ದಿನಾಂಕ: 7ನೇ ಮಾರ್ಚ್, 2011 ರಂದು ಮಂಡಿಸಲಾಯಿತು.

**ಕರ್ನಾಟಕ ವಿಧಾನ ಪರಿಷತ್ತು**

**ನೂರ ಹದಿನಾಲ್ಕನೇ ಅಧಿವೇಶನ**

**(ಮುಂದುವರೆದ ಉಪವೇಶನಗಳು)**

## ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ವಿಧೇಯಕ, 2011

**(2011ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 4)**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ನ್ನು (2001ರ ಕರ್ನಾಟಕ ಅಧಿನಿಯಮ 33) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011** ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 1ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ (2001ರ ಕರ್ನಾಟಕ ಅಧಿನಿಯಮ 33) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 1ನೇ ಪ್ರಕರಣದಲ್ಲಿ, (4)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(4) ಇದು ಒಂದು ಮಠಕ್ಕೆ ಅಥವಾ ಮಠಕ್ಕೆ ಸೇರಿದ ಅಥವಾ ಅದು ನಿರ್ವಹಿಸುತ್ತಿರುವ ದೇವಸ್ಥಾನಕ್ಕೆ ಅನ್ವಯವಾಗತಕ್ಕದ್ದಲ್ಲ."

**3. 2ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 2ನೇ ಪ್ರಕರಣದಲ್ಲಿ,–

(1) (1)ನೇ ಖಂಡಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) "ವಾಸ್ತುಶಿಲ್ಪ ಸಮಿತಿ" ಎಂದರೆ, 69ಡಿ ಪ್ರಕರಣದಡಿಯಲ್ಲಿ ರಚಿಸಿದ ವಾಸ್ತುಶಿಲ್ಪ ಸಮಿತಿ".

(2) (5)ನೇ ಖಂಡಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(5) "ಧರ್ಮಾದಾಯ ದತ್ತಿ" ಎಂದರೆ, ಯಾವುದೇ ಧಾರ್ಮಿಕ ಧರ್ಮಾದಾಯದ ಉದ್ದೇಶಕ್ಕಾಗಿ ಕೊಟ್ಟಿರುವ ಅಥವಾ ದತ್ತಿ ಬಿಡಲಾದ ಎಲ್ಲಾ ಸ್ವತ್ತು;"

(3) (6)ನೇ ಖಂಡಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(6) "ಧರ್ಮಾದಾಯ ಸಂಸ್ಥೆ" ಎಂದರೆ, ಧರ್ಮಾದಾಯ ಉದ್ದೇಶಕ್ಕಾಗಿ ರಚಿತವಾದ ಯಾವುದೇ ಸ್ಥಾಪನೆ, ಉದ್ಯಮ, ಸಂಘ ಅಥವಾ ಸಂಸ್ಥೆ ಮತ್ತು ಇದು ನಿರ್ದಿಷ್ಟ ದತ್ತಿ ಮತ್ತು ಧರ್ಮಾದಾಯಮ್ ಅನ್ನು ಒಳಗೊಳ್ಳುತ್ತದೆ."

(4) (10)ನೇ ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(10ಎ) "ಸಂಯುಕ್ತ ಸಂಸ್ಥೆ" ಎಂದರೆ, ಮತ್ತು ಅದು ಒಂದು ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಸಂಸ್ಥೆಯನ್ನು ಅಥವಾ ರೂಢಿ, ಸಂಪ್ರದಾಯ ಹಾಗೂ ಅಲ್ಲಿ ಪ್ರಚಲಿತವಾಗಿರುವ ಆಚರಣೆಗನುಸಾರವಾಗಿ ಹಿಂದೂಗಳ ಮತ್ತು ಇತರ ಧರ್ಮದವರ ಪೂಜಾ ಸ್ಥಳ ಮತ್ತು ಸಾಮಾನ್ಯವಾಗಿ ಮತ್ತು ಜಂಟಿಯಾಗಿ ಹಿಂದೂಗಳು ಹಾಗೂ ಇತರ ಧರ್ಮದವರು ಪೂಜೆ ಸಲ್ಲಿಸುವ ಸ್ಥಳವನ್ನು ಒಳಗೊಳ್ಳುತ್ತದೆ."

(5) (12)ನೇ ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(12ಎ) "ಧಾರ್ಮಿಕ ಪರಿಷತ್ತು" ಎಂದರೆ, 20ನೇ ಪ್ರಕರಣದ ಅಡಿಯಲ್ಲಿ ರಚಿತವಾದ ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರ 21ನೇ ಪ್ರಕರಣದ ಅಡಿಯಲ್ಲಿ ರಚಿತವಾದ ಜಿಲ್ಲಾ ಧಾರ್ಮಿಕ ಪರಿಷತ್ತು."

(6) (14)ನೇ ಖಂಡದ ತರುವಾಯ, ಈ ಮುಂದಿನದ್ದು ಸೇರಿಸತಕ್ಕದ್ದು, ಎಂದರೆ:-

"(14ಎ) "ದತ್ತಿ ಸಮೀಕ್ಷಾ ಅಧಿಕಾರಿ" ಎಂದರೆ, 31ನೇ ಪ್ರಕರಣದ ಅಡಿಯಲ್ಲಿ ನೇಮಕವಾದ ದತ್ತಿ ಸಮೀಕ್ಷಾ ಅಧಿಕಾರಿ;

(14ಬಿ) "ಕುಟುಂಬ ದೇವಸ್ಥಾನ" ಎಂದರೆ, ಯಾವುದೇ ಕುಟುಂಬದ ಸದಸ್ಯರು ಸ್ವತಃ ತಾವಾಗಿಯೇ ಆಗಲೀ ಅಥವಾ ಕುಟುಂಬದ ಸದಸ್ಯರನ್ನು ಮಾತ್ರ ಒಳಗೊಂಡಿರುವ ಕುಟುಂಬ ನ್ಯಾಸಧಾರಿಗಳ ಮೂಲಕವೇ ಆಗಲಿ ಸ್ಥಾಪಿಸಿದ ಅಥವಾ ಅವರೇ ನಿರ್ವಹಿಸುವ ಯಾವುದೇ ದೇವಸ್ಥಾನ.

(14ಸಿ) "ಕುಟುಂಬ ಧರ್ಮಾದಾಯ ದತ್ತಿ" ಎಂದರೆ, ಯಾವುದೇ ರೀತಿಯಲ್ಲಿ, ಸಾರ್ವಜನಿಕರಿಂದ ಯಾವುದೇ ದಾನ ಅಥವಾ ಕೊಡುಗೆಗಳನ್ನು ಸ್ವೀಕರಿಸದೇ ಕುಟುಂಬದ ಅಥವಾ ಕುಟುಂಬದ ಸದಸ್ಯರ ನಿಧಿಯಿಂದಲೇ ಸ್ಥಾಪಿಸಲಾಗಿರುವ ಮತ್ತು ನಿರ್ವಹಿಸಲಾಗುತ್ತಿರುವ ಯಾವುದೇ ಧರ್ಮಾದಾಯ ಸಂಸ್ಥೆ."

(7) (15)ನೇ ಖಂಡದಲ್ಲಿ "ತತ್ಕಾಲದಲ್ಲಿ ಜಾರಿಯಲ್ಲಿರುವ ಉತ್ತರಾಧಿಕಾರದ ಕಾನೂನಿಗೆ ಅನುಸಾರವಾಗಿ" ಎಂಬ ಪದಗಳ ತರುವಾಯ "ಅಥವಾ ಯಾವುದೇ ಅಧಿನಿಯಮದ ಅಡಿಯಲ್ಲಿ ಅಥವಾ ಯಾವುದೇ ಅಧಿನಿಯಮದ ಅಡಿಯಲ್ಲಿ ಹಾಗೆ ದಾಖಲಾಗಿದೆಯೆಂದು ಯಾವುದೇ ನ್ಯಾಯಾಲಯ ಅಥವಾ ಶಾಸನಾತ್ಮಕ ಪ್ರಾಧಿಕಾರದಿಂದ ಘೋಷಿಸಲಾದಂತೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

(8) (16)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(16) "ಹಿಂದೂ ಧಾರ್ಮಿಕ ವರ್ಗ" ಎಂದರೆ, ಒಂದೇ ಹೆಸರಿನ ಅಡಿಯಲ್ಲಿ ಒಟ್ಟಿಗೆ ವರ್ಗೀಕರಿಸಲಾದ ಹಿಂದೂ ವ್ಯಕ್ತಿಗಳ ಅಥವಾ ಭಕ್ತರ ಸಮೂಹ, ಹಿಂದೂ ಧಾರ್ಮಿಕ ಶಾಖೆ ಅಥವಾ ಅದರ ಉಪಶಾಖೆ ಅಥವಾ ನಿಕಾಯ ಅಥವಾ ಒಂದು ಶಾಖೆ ಅಥವಾ ಪ್ರತ್ಯೇಕ ಹೆಸರಿನಿಂದ ಕರೆಯಲ್ಪಡುವ ಸಾಮಾನ್ಯ ನಂಬಿಕೆ, ರೂಢಿಗಳು, ಆಚರಣೆಗಳು, ಸಾಂಪ್ರದಾಯಿಕ ಆಚರಣೆಗಳು ಮತ್ತು ಪೂಜಾ ವಿಧಾನಗಳನ್ನು ಹೊಂದಿರುವುದನ್ನು ಪ್ರತಿನಿಧಿಸುವ ಆಧ್ಯಾತ್ಮಿಕ ಭ್ರಾತೃತ್ವ."

(9) (17)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(17) 'ಧಾರ್ಮಿಕ ಸಂಸ್ಥೆ' ಎಂದರೆ, ಒಂದು ದೇವಸ್ಥಾನ ಅಥವಾ ಒಂದು ದತ್ತಿ ಮತ್ತು ಇದು ಒಂದು ಬೃಂದಾವನ, ಸಮಾಧಿ, ಪೀಠ, ಪಾದುಕೆ, ಬಸದಿ, ಬೌದ್ಧವಿಹಾರ, ಗುರುದ್ವಾರ ಅಥವಾ ಧಾರ್ಮಿಕ ಉದ್ದೇಶಕ್ಕಾಗಿ ಸ್ಥಾಪನೆಯಾದ ಅಥವಾ ನಿರ್ವಹಿಸಲಾದ ಯಾವುದೇ ಇತರ ಸಂಸ್ಥೆಯನ್ನು ಒಳಗೊಳ್ಳುತ್ತದೆ."

(10) (19)ನೇ ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(19ಎ) "ಮಠ" ಎಂದರೆ, ಒಂದು ವರ್ಗ, ಪಂಥ ಅಥವಾ ಸಂಪ್ರದಾಯಕ್ಕೆ ಸೇರಿರುವ ಮಠದ ಧರ್ಮದ ಬೋಧನೆ ಮತ್ತು ತತ್ವಜ್ಞಾನ ಹಾಗೂ ಬೋಧನೆಗಳು ಮತ್ತು ಪ್ರಸಾರದಲ್ಲಿ ತನ್ನನ್ನು ತೊಡಗಿಸಿಕೊಂಡಿರುವ ಮತ್ತು ಶಿಷ್ಯ ಸಮುದಾಯದ ಮೇಲೆ ಆಧ್ಯಾತ್ಮಿಕ ಅಧಿಕಾರವನ್ನು ಹೊಂದಿರುವ ಅಥವಾ ಹೊಂದಿರುವುದಾಗಿ ಹಕ್ಕು ಸಾಧಿಸಿ ಆಧ್ಯಾತ್ಮಿಕ ಸೇವೆಯನ್ನು ಸಲ್ಲಿಸುತ್ತಿರುವ ಮತ್ತು ಧಾರ್ಮಿಕ ಶಿಕ್ಷಣ ಮತ್ತು ತರಬೇತಿಯನ್ನು ನೀಡುವ ಪ್ರಧಾನ ಕರ್ತವ್ಯವನ್ನು ಸ್ವತ: ಹೊಂದಿರುವ ವ್ಯಕ್ತಿಯು ಅಧ್ಯಕ್ಷನಾಗಿರುವ ಒಂದು ಧಾರ್ಮಿಕ ಸಂಸ್ಥೆ ಮತ್ತು ಇದು ಮಠಗಳಿಗೆ ಧಾರ್ಮಿಕವಾಗಿಯಾಗಲೀ ಅಥವಾ ಆಡಳಿತಾತ್ಮಕವಾಗಿಯಾಗಲೀ ಸೇರಿದ ಧಾರ್ಮಿಕ ಸಂಸ್ಥೆಗಳನ್ನು ಒಳಗೊಂಡ, ಸಂಸ್ಥೆಗೆ ಉಚಿತವಾದ ಧಾರ್ಮಿಕ ಪೂಜಾ ಶಿಕ್ಷಣ ಅಥವಾ ತರಬೇತಿಯನ್ನು ನೀಡುವ ಯಾವುದೇ ಧಾರ್ಮಿಕ ಪೂಜಾ ಸ್ಥಳ ಅಥವಾ ಸ್ಥಳಗಳನ್ನು ಒಳಗೊಳ್ಳುತ್ತದೆ."

(11) (23)ನೇ ಖಂಡದಲ್ಲಿ "ಧಾರ್ಮಿಕ ಸಂಸ್ಥೆಗಳಲ್ಲದ ಇತರ ಸಂಸ್ಥೆಗಳನ್ನು ಸಹ ಹೊಂದಿರುವ ಸಂಯುಕ್ತ ಸಂಸ್ಥೆಯ ಬೇರ್ಪಡಿಸಲಾಗದ ಅವಿಭಾಜ್ಯ ಅಂಗವಾಗಿರುವಂಥ ಒಂದು ಸಂಸ್ಥೆಯನ್ನು ಹೊರತುಪಡಿಸಿ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(12) (27)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(27) "ದೇವಸ್ಥಾನ" ಎಂದರೆ, ಯಾವುದೇ ಹೆಸರಿನಿಂದ ಕರೆಯುವ, ಪ್ರತ್ಯೇಕ ಅಸ್ತಿತ್ವ ಹೊಂದಿರುವ, ಒಂದು ಸಾರ್ವಜನಿಕ ಧಾರ್ಮಿಕ ಪೂಜಾಸ್ಥಳವನ್ನಾಗಿ ಬಳಸಲಾಗುವ ಮತ್ತು ಹಿಂದೂ ಸಮುದಾಯಕ್ಕೆ ಅಥವಾ ಅದರ ಯಾವುದೇ ಶಾಖೆಗೆ ಅಥವಾ ಅದರ ಪ್ರಯೋಜನಕ್ಕಾಗಿ ಸಮರ್ಪಿಸಲಾದ ಅಥವಾ ಹಕ್ಕು ಎಂಬಂತೆ ಸಾರ್ವಜನಿಕ ಧಾರ್ಮಿಕ ಪೂಜಾ ಸ್ಥಳವಾಗಿ ಬಳಸುವ ಒಂದು ಸ್ಥಳ ಮತ್ತು ಇದು ಮಂದಿರ, ಸಮಾಧಿ, ಬೃಂದಾವನ, ಗದ್ದುಗೆ, ದೇವಾಲಯ, ಉಪದೇವಾಲಯಗಳು, ಉತ್ಸವ ಮಂಟಪ, ಕಲ್ಯಾಣಿ, ಪಾದುಕಾ ಪೀಠ, ದೈವಸ್ಥಾನ, ಗುಡಿ, ಗರೋಡಿ ಅಥವಾ ಇತರ ಅವಶ್ಯಕ ಲಗತ್ತಾದ ಸ್ಥಳಗಳು, ರಚನೆಗಳು ಮತ್ತು ಭೂಮಿಯನ್ನು ಒಳಗೊಳ್ಳುತ್ತದೆ."

**4. 3ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 3ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ "ಏಕಮಾತ್ರ ನಿಗಮವಾಗಿರತಕ್ಕದ್ದು ಮತ್ತು" ಎಂಬ ಪದಗಳ ತರುವಾಯ "ರಾಜ್ಯ ಧಾರ್ಮಿಕ ಪರಿಷತ್ತಿನ ಅಧಿಕಾರಗಳು ಮತ್ತು ಅಧಿಕಾರ ವ್ಯಾಪ್ತಿಗೆ ಒಳಪಟ್ಟು" ಎಂಬ ಪದಗಳನ್ನು ಸೇರಿಸತಕ್ಕದ್ದು.

**5. 4ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 4ನೇ ಪ್ರಕರಣದಲ್ಲಿ,–

(1) (1)ನೇ ಉಪಪ್ರಕರಣದಲ್ಲಿ, "ಆಯುಕ್ತನ ಪ್ರಾಧಿಕಾರಕ್ಕೆ ಒಳಪಟ್ಟು" ಎಂಬ ಪದಗಳ ತರುವಾಯ "ಮತ್ತು ಜಿಲ್ಲಾ ಧಾರ್ಮಿಕ ಪರಿಷತ್ತಿನ ಅಧಿಕಾರಗಳಿಗೆ ಮತ್ತು ಅಧಿಕಾರ ವ್ಯಾಪ್ತಿಗೆ ಒಳಪಟ್ಟು" ಎಂಬ ಪದಗಳನ್ನು ಸೇರಿಸತಕ್ಕದ್ದು.

(2) (2)ನೇ ಉಪಪ್ರಕರಣದಲ್ಲಿ, "ಅವನಿಗೆ ಪ್ರತ್ಯಾಯೋಜಿಸಬಹುದಾದ ಅಂಥ ಕರ್ತವ್ಯಗಳನ್ನು ನಿರ್ವಹಿಸಲು ಅಥವಾ ಅಂಥ ಅಧಿಕಾರಗಳನ್ನು ಚಲಾಯಿಸಲು" ಎಂಬ ಪದಗಳ ತರುವಾಯ, "ಮತ್ತು ಜಿಲ್ಲಾ ಧಾರ್ಮಿಕ ಪರಿಷತ್ತಿನ ಅಧಿಕಾರಗಳಿಗೆ ಮತ್ತು ಅಧಿಕಾರ ವ್ಯಾಪ್ತಿಗೆ ಒಳಪಟ್ಟು" ಎಂಬ ಪದಗಳನ್ನು ಸೇರಿಸತಕ್ಕದ್ದು.

**6. 9ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 9ನೇ ಪ್ರಕರಣದಲ್ಲಿ,–

(i) ಶೀರ್ಷಿಕೆಯಲ್ಲಿ 'ಅರ್ಚಕರ' ಎಂಬ ಪದದ ತರುವಾಯ "ಮತ್ತು ದೇವಸ್ಥಾನದ ನೌಕರರ" ಎಂಬ ಪದಗಳನ್ನು ಮತ್ತು (1)ನೇ ಉಪಪ್ರಕರಣದಲ್ಲಿ, "ಅರ್ಚಕರನ್ನು" ಎಂಬ ಪದದ ತರುವಾಯ "ಮತ್ತು ದೇವಸ್ಥಾನದ ನೌಕರರನ್ನು" ಎಂಬ ಪದಗಳನ್ನು ಸೇರಿಸತಕ್ಕದ್ದು; ಮತ್ತು

(ii) (1)ನೇ ಉಪ ಪ್ರಕರಣದ ತರುವಾಯ, ಈ ಮುಂದಿನ ಪರಂತುಕಗಳನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ವಂಶಪಾರಂಪರ್ಯ ಹುದ್ದೆಯ ಸಂದರ್ಭದಲ್ಲಿ, ಆ ಕುಟುಂಬದ ಸದಸ್ಯರ ನಡುವೆ ಯಾವುದೇ ವಿವಾದ ಇಲ್ಲದಿದ್ದರೆ, ಆಯುಕ್ತನ ಪೂರ್ವಾನುಮೋದನೆಯೊಡನೆ ನಿಕಟ ಮುಂದಿನ ಪೀಳಿಗೆಯ ಉತ್ತರಾಧಿಕಾರಿಯನ್ನು ನೇಮಕಮಾಡತಕ್ಕದ್ದು:

ಮತ್ತೂ ಪರಂತು, ವಂಶಪಾರಂಪರ್ಯ ಹುದ್ದೆಗೆ ಯಾವೊಬ್ಬ ಕಾನೂನು ಸಮ್ಮತ ವಾರಸುದಾರನು ಲಭ್ಯವಿಲ್ಲದಿರುವ ಸಂದರ್ಭದಲ್ಲಿ, ಆಡಳಿತ ಸಮಿತಿಯು, (1)ನೇ ಉಪ ಪ್ರಕರಣದ ಅಡಿಯಲ್ಲಿ ಉಪಬಂಧಿಸಲಾದಂತೆ ಯಾವೊಬ್ಬ ವ್ಯಕ್ತಿಯನ್ನು ನೇಮಕ ಮಾಡಬಹುದು."

(iii) (3)ನೇ ಉಪ ಪ್ರಕರಣದಲ್ಲಿ, "ಅರ್ಚಕರ ಸಂಖ್ಯೆಯು" ಎಂಬ ಪದಗಳ ತರುವಾಯ, "ಮತ್ತು ದೇವಸ್ಥಾನದ ನೌಕರರ ಸಂಖ್ಯೆಯು" ಎಂಬ ಪದಗಳನ್ನು ಸೇರಿಸತಕ್ಕದ್ದು.

**7. 10ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 10ನೇ ಪ್ರಕರಣದಲ್ಲಿ,–

(i) (1)ನೇ ಉಪ ಪ್ರಕರಣದಲ್ಲಿ, "(ವಾರ)" ಎಂಬ ಆವರಣ ಚಿಹ್ನೆಗಳು ಮತ್ತು ಪದಕ್ಕೆ "(ಪ್ರವರ)" ಎಂಬ ಆವರಣ ಚಿಹ್ನೆ ಮತ್ತು ಪದವನ್ನು ಪ್ರತಿಯೋಜಿಸತಕ್ಕದ್ದು;

(ii) (2)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ. 2011ರ ಪ್ರಾರಂಭದ ದಿನಾಂಕದಂದು ಸೇವೆಯಲ್ಲಿರುವಂಥ ವಂಶಪಾರಂಪರ್ಯ ಅರ್ಚಕರನ್ನು ಹೊರತುಪಡಿಸಿ ಇತರ ಅರ್ಚಕರು, ಅವರಿಗೆ ನಲವತ್ತೈದು ವರ್ಷ ವಯಸ್ಸು ಮೀರಿರದಿದ್ದರೆ, ಐದು ವರ್ಷಗಳ ಕಾಲಮಿತಿಯೊಳಗೆ ನಿಯಮಿಸಲಾದ ವಿದ್ಯಾರ್ಹತೆಯನ್ನು ಗಳಿಸಿದರೆ, ಅವರನ್ನು ಅರ್ಚಕರಾಗಿ ಮುಂದುವರೆಸತಕ್ಕುದ್ದು."

**8. 10ಎ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 10ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**10ಎ ಅರ್ಚಕರ ಅನರ್ಹತೆ.–** ಒಬ್ಬ ವ್ಯಕ್ತಿಯು,

(ಎ) ಯಾವುದೇ ಸಾಂಕ್ರಾಮಿಕ ಅಥವಾ ಅಂಟು ರೋಗದಿಂದ ನರಳುತ್ತಿದ್ದರೆ; ಅಥವಾ

(ಬಿ) ವೇದ ಮಂತ್ರಗಳನ್ನು ಅಥವಾ ಶ್ಲೋಕಗಳನ್ನು ಪಠಿಸುವುದು ಕಡ್ಡಾಯವಾಗಿಲ್ಲದಿರುವ ಅಥವಾ ಆಜ್ಞಾಪಕವಾಗಿಲ್ಲದಿರುವ ದೇವಸ್ಥಾನಗಳನ್ನು ಹೊರತುಪಡಿಸಿ, ಸಂಬಂಧಪಟ್ಟ ದೇವಸ್ಥಾನದಲ್ಲಿ ಧಾರ್ಮಿಕ ವಿಧಿಗಳಿಗೆ ಸಂಬಂಧಪಟ್ಟ ವೇದ ಮಂತ್ರಗಳನ್ನು ಅಥವಾ ಶ್ಲೋಕಗಳನ್ನು ಸ್ಪಷ್ಟವಾಗಿ ಮತ್ತು ಯಾವುದೇ ತಪ್ಪಿಲ್ಲದಂತೆ ಪಠಿಸಲು ಅಸಮರ್ಥನಾಗಿದ್ದರೆ;

(ಸಿ) 'ಸಪ್ತ ವ್ಯಸನ'ಗಳಿಂದ ಮುಕ್ತನಾಗಿಲ್ಲದಿದ್ದರೆ–

– ಅವನು ಅರ್ಚಕನಾಗಿ ನೇಮಕಗೊಳ್ಳಲು ಅಥವಾ ಅರ್ಚಕನಾಗಿ ಮುಂದುವರೆಯಲು ಅನರ್ಹನಾಗತಕ್ಕದ್ದು.

**ವಿವರಣೆ.–** 'ಸಪ್ತ ವ್ಯಸನಗಳು' ಎಂಬ ಪದಾವಳಿಗೆ ಜೂಜು ಆಡುವುದು, ಮದ್ಯಪಾನ ಮಾದಕ ದ್ರವ್ಯವನ್ನು ಸೇವಿಸುವುದು, ಧೂಮಪಾನ ಮಾಡುವುದು, ಅನೈತಿಕ ಲೈಂಗಿಕ ವರ್ತನೆ, ಘೋರ ಅಪರಾಧವನ್ನು ಒಳಗೊಂಡ ಕಳ್ಳತನ ಮಾಡುವುದು ಮತ್ತು ಮೋಸ ಮಾಡುವುದು ಎಂದು ಅರ್ಥ.

**9. 12ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 12ನೇ ಪ್ರಕರಣದಲ್ಲಿ,–

(i) (1)ನೇ ಉಪ ಪ್ರಕರಣದಲ್ಲಿ, "ಸರದಿ ಮೇಲೆ ಕೆಲಸ ಮಾಡುವುದು," ಎಂಬ ಪದಗಳು ಮತ್ತು ಅಲ್ಪವಿರಾಮ ಚಿಹ್ನೆಯ ತರುವಾಯ "ವಂಶಪಾರಂಪರ್ಯವಲ್ಲದ ಅರ್ಚಕರು ಮತ್ತು ದೇವಸ್ಥಾನದ ನೌಕರರ ನಿವೃತ್ತಿ," ಎಂಬ ಪದಗಳನ್ನು ಮತ್ತು ಅಲ್ಪವಿರಾಮ ಚಿಹ್ನೆಯನ್ನು ಸೇರಿಸತಕ್ಕದ್ದು; ಮತ್ತು

(ii) (2)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ಅರ್ಚಕರ ಮತ್ತು ದೇವಸ್ಥಾನದ ನೌಕರರ ಉಪಲಬ್ಧಿಗಳು, ವೇತನ ಮತ್ತು ಭತ್ಯೆಗಳು, ಸಂಬಂಧಪಟ್ಟ ಅಧಿಸೂಚಿತ ಸಂಸ್ಥೆಯಲ್ಲಿ ಇರುವ ಆದಾಯ, ಆಚರಣೆ, ರೂಢಿ ಮತ್ತು ಪರಂಪರೆಗೆ ಸೂಕ್ತ ಗಮನವನ್ನು ನೀಡಿ ನಿಷ್ಪಕ್ಷಪಾತವಾಗಿ ಮತ್ತು ಯುಕ್ತವಾಗಿ ನಿಗದಿಪಡಿಸಿದಂಥದ್ದು ಆಗಿರತಕ್ಕದ್ದು. ರಾಜ್ಯ ಸರ್ಕಾರವು ನಿಯಮಿಸಬಹುದಾದಂತೆ, ದೇವಸ್ಥಾನಗಳನ್ನು, ಅವುಗಳ ಆದಾಯದ ಆಧಾರದ ಮೇಲೆ, ಎರಡು ಅಥವಾ ಮೂರು ವರ್ಗಗಳಾಗಿ ವರ್ಗೀಕರಿಸಬಹುದು."

**10. 17ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 17ನೇ ಪ್ರಕರಣದಲ್ಲಿ,–

(i) "ಆಯುಕ್ತನು" ಎಂಬ ಪದಕ್ಕೆ "ರಾಜ್ಯ ಧಾರ್ಮಿಕ ಪರಿಷತ್ತು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) (ಎ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎ) ಅಧಿಸೂಚಿತ ಅಥವಾ ಘೋಷಿತ ಸಂಸ್ಥೆಗಳು ಈ ಮುಂದಿನ ದರದಲ್ಲಿ ನೀಡಿದ ವಂತಿಗೆಗಳು:–

(1) ಯಾವ ಸಂಸ್ಥೆಗಳ ಒಟ್ಟು ವಾರ್ಷಿಕ ಆದಾಯವು ಹತ್ತು ಲಕ್ಷ ರೂಪಾಯಿಗಳನ್ನು ಮೀರುವುದೋ ಆ ಸಂಸ್ಥೆಗಳಿಗೆ ಸಂಬಂಧಪಟ್ಟ ನಿವ್ವಳ ಆದಾಯದ ಶೇಕಡಾ ಹತ್ತರಷ್ಟು;

(2) ಯಾವ ಸಂಸ್ಥೆಗಳ ಒಟ್ಟು ವಾರ್ಷಿಕ ಆದಾಯವು ಐದು ಲಕ್ಷ ರೂಪಾಯಿಗಳನ್ನು ಮೀರಿದ್ದು, ಆದರೆ ಹತ್ತು ಲಕ್ಷ ರೂಪಾಯಿಗಳನ್ನು ಮೀರಿರುವುದಿಲ್ಲವೋ ಆ ಸಂಸ್ಥೆಗಳಿಗೆ ಸಂಬಂಧಪಟ್ಟ ನಿವ್ವಳ ಆದಾಯದ ಶೇಕಡಾ ಐದರಷ್ಟು."

**11. 19ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 19ನೇ ಪ್ರಕರಣದಲ್ಲಿ,

(i) (1)ನೇ ಉಪಪ್ರಕರಣದಲ್ಲಿ,–

(ಎ) "ಆಯುಕ್ತನು" ಎಂಬ ಪದಕ್ಕೆ "ರಾಜ್ಯ ಧಾರ್ಮಿಕ ಪರಿಷತ್ತು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) (ಐ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಐ) ಸಂಸ್ಥೆಯ ಜಮೆಯಲ್ಲಿ ಸಾಕಷ್ಟು ಹಣ ಇಲ್ಲದಿರುವಾಗ ಅರ್ಚಕರಿಗೆ ಮತ್ತು ದೇವಸ್ಥಾನದ ನೌಕರರಿಗೆ ಸೇವಾಂತ ಪ್ರಯೋಜನಗಳ ಸಂದಾಯ."

(ii) (3)ನೇ ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**12. 20ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 20ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"20. ರಾಜ್ಯ ಧಾರ್ಮಿಕ ಪರಿಷತ್.–** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ, ಅಧಿಸೂಚನೆ ಮೂಲಕ, ಈ ಮುಂದಿನ ಸದಸ್ಯರನ್ನು ಒಳಗೊಂಡ ಕರ್ನಾಟಕ ರಾಜ್ಯ ಧಾರ್ಮಿಕ ಪರಿಷತ್ತನ್ನು ರಚಿಸಬಹುದು, ಎಂದರೆ:–

| | | | |
|---|---|---|---|
| (ಎ) | ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಪ್ರಭಾರದಲ್ಲಿರುವ ಸಚಿವರು | – | ಅಧ್ಯಕ್ಷರು |
| (ಬಿ) | ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ | – | ಉಪಾಧ್ಯಕ್ಷರು |
| (ಸಿ) | ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳು | – | ಪದನಿಮಿತ್ತ ಕಾರ್ಯದರ್ಶಿ |
| (ಡಿ) | ಮೂರು ವರ್ಷಗಳ ಅವಧಿಗಾಗಿ ಸರ್ಕಾರವು ನಾಮನಿರ್ದೇಶನ ಮಾಡಬೇಕಾದ ಸದಸ್ಯರು | | |
| | (i) ಒಬ್ಬ ನಿವೃತ್ತ ಜಿಲ್ಲಾ ನ್ಯಾಯಾಧೀಶರು | – | ಸದಸ್ಯರು |
| | (ii) ಒಬ್ಬ ಆಗಮ ವಿದ್ವಾಂಸರು | – | ಸದಸ್ಯರು |
| | (iii) ಒಬ್ಬ ವೇದ ವಿದ್ವಾಂಸರು | – | ಸದಸ್ಯರು |
| | (iv) ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಒಬ್ಬ ವ್ಯಕ್ತಿ | – | ಸದಸ್ಯರು |
| | (v) ಹಿಂದುಳಿದ ವರ್ಗಗಳಿಗೆ ಸೇರಿದ ಒಬ್ಬ ವ್ಯಕ್ತಿ | – | ಸದಸ್ಯರು |
| | (vi) ಒಬ್ಬ ಮಹಿಳೆ | – | ಸದಸ್ಯರು |
| | (vii) ಇತರೆ ಇಬ್ಬರು | – | ಸದಸ್ಯರು |

(2) ಜಿಲ್ಲಾ ನ್ಯಾಯಾಧೀಶರನ್ನು ಹೊರತುಪಡಿಸಿ, (1)ನೇ ಉಪಪ್ರಕರಣದ ಅಡಿಯಲ್ಲಿ ಸರ್ಕಾರದಿಂದ ನಾಮನಿರ್ದೇಶಿತರಾದ ಸದಸ್ಯರು, ಸರ್ಕಾರದ ಇಚ್ಛೆಗೊಳಪಟ್ಟು ಪದದಲ್ಲಿರತಕ್ಕದ್ದು.

(3) ಸರ್ಕಾರದಿಂದ ನಾಮನಿರ್ದೇಶಿತನಾದ ಸದಸ್ಯನು, ಹಿಂದೂ ಧಾರ್ಮಿಕ ಕ್ಷೇತ್ರಕ್ಕೆ ಕೊಡುಗೆಯನ್ನು ನೀಡಿರುವ ವ್ಯಕ್ತಿಯಾಗಿರತಕ್ಕದ್ದು ಮತ್ತು ಯಾವುದೇ ಹಂತದಲ್ಲಿ ಯಾವುದೇ ರಾಜಕೀಯ ಪಕ್ಷದ ಪದಾಧಿಕಾರಿಯಾಗಿರತಕ್ಕದ್ದಲ್ಲ.

(4) ಮರಣ, ರಾಜೀನಾಮೆ ಅಥವಾ ಅನ್ಯಥಾ ಕಾರಣಕ್ಕಾಗಿ ಯಾವುದೇ ಖಾಲಿಸ್ಥಾನವು ಉಂಟಾದ ಸಂದರ್ಭದಲ್ಲಿ, ಸರ್ಕಾರವು ಅಂಥ ಸದಸ್ಯನ ಕಾಲಾವಧಿಯ ಉಳಿದ ಅವಧಿಗಾಗಿ ಒಬ್ಬ ಸದಸ್ಯನನ್ನು ನೇಮಿಸಬಹುದು.

(5) ರಾಜ್ಯ ಧಾರ್ಮಿಕ ಪರಿಷತ್ತು, ಸಮಾಲೋಚನೆ ನಡೆಸುವ ಉದ್ದೇಶಕ್ಕಾಗಿ, ತನ್ನ ಸಭೆಗಳಿಗೆ ಹಾಜರಾಗಲು ಯಾವುದೇ ವಿಷಯದಲ್ಲಿ ಅನುಭವ ಮತ್ತು ವಿಶೇಷ ಜ್ಞಾನ ಹೊಂದಿರುವ ಅಥವಾ ಪರಿಣಿತನಾದ ಯಾವೊಬ್ಬ ವ್ಯಕ್ತಿಯನ್ನು ಆಹ್ವಾನಿಸಬಹುದು ಮತ್ತು ಅಂಥ ಪ್ರತಿಯೊಬ್ಬ ವ್ಯಕ್ತಿಯು ನಿಯಮಿಸಬಹುದಾದಂಥ ಭತ್ಯೆಗಳನ್ನು ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು.

(6) ಸರ್ಕಾರವು, ನಿಯಮಗಳನ್ನು ರಚಿಸುವ ಅಧಿಕಾರಗಳನ್ನು ಹೊರತುಪಡಿಸಿ ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ, ತನ್ನ ಯಾವುವೇ ಅಧಿಕಾರಗಳನ್ನು ಮತ್ತು ಪ್ರಕಾರ್ಯಗಳನ್ನು ರಾಜ್ಯ ಧಾರ್ಮಿಕ ಪರಿಷತ್ತಿಗೆ ಪ್ರತ್ಯಾಯೋಜಿಸಬಹುದು.

(7) ಅಧ್ಯಕ್ಷನ ಗೈರುಹಾಜರಿಯಲ್ಲಿ, ಉಪಾಧ್ಯಕ್ಷನು ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

(8) ನಾಮನಿರ್ದೇಶಿತ ಸದಸ್ಯರ ಗೈರುಹಾಜರಿಯಲ್ಲಿ ಉಳಿದ ಸದಸ್ಯರು ರಾಜ್ಯ ಧಾರ್ಮಿಕ ಪರಿಷತ್ತನ್ನು ರಚಿಸಕ್ಕದ್ದು.

(9) ರಾಜ್ಯ ಧಾರ್ಮಿಕ ಪರಿಷತ್ತಿನ ಸಂಬಂಧದಲ್ಲಿನ ಅಥವಾ ಅದಕ್ಕೆ ಮಾಡುವ ಎಲ್ಲಾ ಪತ್ರವ್ಯವಹಾರಗಳು, ರಾಜ್ಯ ಧಾರ್ಮಿಕ ಪರಿಷತ್ತಿನ ಕಾರ್ಯದರ್ಶಿಯಿಂದ ಅಥವಾ ಅವರಿಗೆ ಮಾಡತಕ್ಕದ್ದು ಮತ್ತು ಇದು ದಾವೆ ಹೂಡುವ ಅಥವಾ ದಾವೆಗೆ ಒಳಗಾಗುವ ಅಧಿಕಾರವನ್ನೂ ಒಳಗೊಳ್ಳುತ್ತದೆ.

**20ಎ. ರಾಜ್ಯ ಧಾರ್ಮಿಕ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು.**– ರಾಜ್ಯ ಧಾರ್ಮಿಕ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(1) ರಾಜ್ಯ ಧಾರ್ಮಿಕ ಪರಿಷತ್ತು,–

(ಎ) ಧಾರ್ಮಿಕ ಪದ್ಧತಿಗಳು, ರೂಢಿಗಳು, ಆಚರಣೆ, ಸಂಪ್ರದಾಯಗಳ ಬಗೆಗಿನ ಯಾವುದೇ ವಿವಾದವನ್ನು ಬಗೆಹರಿಸಲು ಅಧಿಕಾರ ಹೊಂದಿರತಕ್ಕದ್ದು ಮತ್ತು ಆ ಉದ್ದೇಶಕ್ಕಾಗಿ, ಅದು, ಅಂಥ ವಿವಾದಗಳನ್ನು ಬಗೆಹರಿಸುವಲ್ಲಿ ನೆರವು ಪಡೆಯಲು ತಜ್ಞರೊಂದಿಗೆ ಸಮಾಲೋಚಿಸಬಹುದು;

(ಬಿ) ಒಂದು ದೇವಸ್ಥಾನವು ಸಾರ್ವಜನಿಕ ದೇವಸ್ಥಾನವೇ, ಖಾಸಗಿ ದೇವಸ್ಥಾನವೇ ಅಥವಾ ವರ್ಗದ ದೇವಸ್ಥಾನವೇ ಎಂಬ ಬಗ್ಗೆ;

(ಸಿ) ಒಂದು ಸಂಸ್ಥೆಯು ಧಾರ್ಮಿಕ ಸಂಸ್ಥೆಯೇ ಅಥವಾ ಸಂಯುಕ್ತ ಸಂಸ್ಥೆಯೇ ಎಂಬ ಬಗ್ಗೆ;

(ಡಿ) ಒಬ್ಬ ನ್ಯಾಸಧಾರಿಯು ಅಂಥ ಸಂಸ್ಥೆಯ ವಂಶಪಾರಂಪರ್ಯ ನ್ಯಾಸಧಾರಿಯಾಗಿ ಪದವನ್ನು ಹೊಂದಿರುವನೇ ಅಥವಾ ಹೊಂದಿದ್ದನೆ ಎಂಬ ಬಗ್ಗೆ,

– ತಲೆದೋರಿದ ಯಾವುದೇ ವಿವಾದವನ್ನು ಬಗೆಹರಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

(2) ರಾಜ್ಯ ಧಾರ್ಮಿಕ ಪರಿಷತ್ತು,–

(i) ಹತ್ತು ಲಕ್ಷ ರೂಪಾಯಿಗಳು ಮತ್ತು ಅದಕ್ಕೂ ಹೆಚ್ಚು ಒಟ್ಟು ವಾರ್ಷಿಕ ಆದಾಯವನ್ನು ಹೊಂದಿರುವ ಅಧಿಸೂಚಿತ ಸಂಸ್ಥೆಗಳಿಗೆ ಒಂದು ವ್ಯವಸ್ಥಾಪನಾ ಸಮಿತಿಯನ್ನು ರಚಿಸಬಹುದು;

(ii) ಎರಡು ಲಕ್ಷ ರೂಪಾಯಿಗಳು ಮತ್ತು ಅದಕ್ಕೂ ಕಡಿಮೆ ಆದಾಯವನ್ನು ಹೊಂದಿರುವ ದೇವಸ್ಥಾನಗಳನ್ನು ದತ್ತು ತೆಗೆದುಕೊಳ್ಳುವುದಕ್ಕಾಗಿ ಯೋಜನೆಯನ್ನು ಅನುಮೋದಿಸಬಹುದು ಮತ್ತು ದತ್ತು ತೆಗೆದುಕೊಳ್ಳಲು ನಿಬಂಧನೆಗಳನ್ನು ನಿಗದಿಪಡಿಸಬಹುದು;

(iii) ಜಿಲ್ಲಾ ಧಾರ್ಮಿಕ ಪರಿಷತ್ತು ಹೊರಡಿಸಿದ ಆದೇಶಗಳ ಸಂಬಂಧದಲ್ಲಿ ಅಪೀಲು ಪ್ರಾಧಿಕಾರದಂತೆ ಕಾರ್ಯನಿರ್ವಹಿಸತಕ್ಕದ್ದು;

(iv) ಈ ಪ್ರಕರಣದಡಿಯಲ್ಲಿ ಉಪಬಂಧಿಸಲಾದಂತೆ ಯಾವುದೇ ವಿವಾದವನ್ನು ನಿರ್ಣಯಿಸುವ ಉದ್ದೇಶಕ್ಕಾಗಿ, ಪರಿಷತ್ತಿನ ನ್ಯಾಯಿಕ ಸದಸ್ಯರು ಹಾಗೂ ಆಯುಕ್ತರನ್ನು ಸದಸ್ಯರನ್ನಾಗಿ ಹೊಂದಿರುವ ಒಂದು ನ್ಯಾಯಾಧಿಕರಣವನ್ನು ರಚಿಸಬಹುದು. ಸದಸ್ಯರ ನಡುವೆ ಭಿನ್ನಾಭಿಪ್ರಾಯ ಬಂದಲ್ಲಿ, ಅದನ್ನು ರಾಜ್ಯ ಧಾರ್ಮಿಕ ಪರಿಷತ್ತು ತೀರ್ಮಾನಿಸತಕ್ಕದ್ದು.

(v) ಅಧಿನಿಯಮದ ಉಪಬಂಧಗಳಡಿಯಲ್ಲಿ ಅಧಿಸೂಚಿಸಬೇಕಾದ ಅಥವಾ ತೆಗೆದುಹಾಕಬೇಕಾದ ಸಂಸ್ಥೆಗಳನ್ನು ಅಧಿಸೂಚಿಸಲು ಅಥವಾ ಅಧಿಸೂಚನೆಯಿಂದ ತೆಗೆದುಹಾಕಲು ಸರ್ಕಾರಕ್ಕೆ ಶಿಫಾರಸ್ಸು ಮಾಡಬಹುದು.

(vi) 28ನೇ ಪ್ರಕರಣದಡಿಯಲ್ಲಿ ಉಪಬಂಧಿಸಲಾದಂತೆ ಹತ್ತು ಲಕ್ಷ ರೂಪಾಯಿಗಳು ಮತ್ತು ಅದಕ್ಕಿಂತ ಹೆಚ್ಚಿನ ಒಟ್ಟು ಆದಾಯವನ್ನು ಹೊಂದಿರುವ ಅಧಿಸೂಚಿತ ಸಂಸ್ಥೆಗಳ ವ್ಯವಸ್ಥಾಪನಾ ಸಮಿತಿಯನ್ನು ರದ್ದುಪಡಿಸಬಹುದು ಮತ್ತು 29ನೇ ಪ್ರಕರಣದಡಿಯಲ್ಲಿ ಅಧಿಸೂಚಿತ ಸಂಸ್ಥೆಗಳಿಗೆ ಆಡಳಿತಗಾರನನ್ನು ನೇಮಕ ಮಾಡಿಕೊಳ್ಳಬಹುದು.

(vii) ಶಾಶ್ವತ ಖಾಲಿ ಸ್ಥಾನವು ಉಂಟಾದಾಗ ಮತ್ತು ವಂಶಪಾರಂಪರ್ಯ ಪದದಲ್ಲಿ ಅದಕ್ಕೆ ಯಾವುದೇ ವಿವಾದವಿಲ್ಲದಿದ್ದರೆ ವಂಶಪಾರಂಪರ್ಯ ನ್ಯಾಸಧಾರಿಯ ಪದಕ್ಕೆ ಉತ್ತರಾಧಿಕಾರಿಯಾಗಲು ಹಕ್ಕುಳ್ಳ ಕುಟುಂಬದ ಸದಸ್ಯನ ಹೆಸರನ್ನು ದಾಖಲು ಮಾಡತಕ್ಕದ್ದು."

**13. 21ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 21ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"21 ಜಿಲ್ಲಾ ಧಾರ್ಮಿಕ ಪರಿಷತ್ತು.–** (1) ರಾಜ್ಯ ಸರ್ಕಾರವು, ರಾಜ್ಯ ಧಾರ್ಮಿಕ ಪರಿಷತ್ತಿನ ಶಿಫಾರಸ್ಸಿನ ಮೇಲೆ, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ಪ್ರತಿಯೊಂದು ಜಿಲ್ಲೆಗೆ ಅಥವಾ ಒಂದು ಅಥವಾ ಹೆಚ್ಚಿನ ಜಿಲ್ಲೆಗಳಿಗೆ ಈ ಮುಂದಿನ ಸದಸ್ಯರುಗಳನ್ನು ಒಳಗೊಂಡಂತೆ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸತಕ್ಕದ್ದು, ಎಂದರೆ:–

| | |
|---|---|
| (ಎ) ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿ | – ಅಧ್ಯಕ್ಷರು |
| (ಬಿ) ಲಭ್ಯವಿರುವೆಡೆಗಳಲೆಲ್ಲ, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಸಂಬಂಧಪಟ್ಟ ಸಹಾಯಕ ಆಯುಕ್ತರು, ಅಥವಾ ಜಿಲ್ಲಾಧಿಕಾರಿ ಕಚೇರಿಯ ದತ್ತಿ ತಹಶೀಲ್ದಾರರು | – ಪದನಿಮಿತ್ತ ಕಾರ್ಯದರ್ಶಿ |
| (ಸಿ) ಮೂರು ವರ್ಷಗಳ ಅವಧಿಗಾಗಿ ಸರ್ಕಾರದಿಂದ ನಾಮನಿರ್ದೇಶಿತರಾಗಬೇಕಾದ ಸದಸ್ಯರು | |
| (i) ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಒಬ್ಬರು ನಿವೃತ್ತ ನ್ಯಾಯಾಂಗ ಅಧಿಕಾರಿ | – ಸದಸ್ಯರು |
| (ii) ಒಬ್ಬರು ಆಗಮ ಪಂಡಿತರು | – ಸದಸ್ಯರು |
| (iii) ಒಬ್ಬರು ವೇದ ವಿದ್ವಾಂಸರು | – ಸದಸ್ಯರು |
| (iv) ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡದಿಂದ ಒಬ್ಬರು | – ಸದಸ್ಯರು |
| (v) ಒಬ್ಬರು ಮಹಿಳೆ | – ಸದಸ್ಯರು |
| (vi) ಹಿಂದುಳಿದ ವರ್ಗಗಳಿಂದ ಒಬ್ಬರು ವ್ಯಕ್ತಿ | – ಸದಸ್ಯರು |
| (vii) ಇಬ್ಬರು ಇತರರು | – ಸದಸ್ಯರು |

(2) ಜಿಲ್ಲಾ ನ್ಯಾಯಾಧೀಶರನ್ನು ಹೊರತುಪಡಿಸಿ, (1)ನೇ ಉಪಪ್ರಕರಣದ ಅಡಿಯಲ್ಲಿ ಸರ್ಕಾರದಿಂದ ನಾಮನಿರ್ದೇಶಿತರಾದ ಸದಸ್ಯರು, ಸರ್ಕಾರದ ಇಚ್ಛೆಗೊಳಪಟ್ಟು ಪದದಲ್ಲಿರತಕ್ಕದ್ದು.

(3) ಸರ್ಕಾರದಿಂದ ನಾಮನಿರ್ದೇಶಿತನಾದ ಸದಸ್ಯನು, ಹಿಂದೂ ಧಾರ್ಮಿಕ ಕ್ಷೇತ್ರಕ್ಕೆ ಕೊಡುಗೆಯನ್ನು ನೀಡಿರುವ ವ್ಯಕ್ತಿಯಾಗಿರತಕ್ಕದ್ದು ಮತ್ತು ಯಾವುದೇ ಹಂತದಲ್ಲಿ ಯಾವುದೇ ರಾಜಕೀಯ ಪಕ್ಷದ ಪದಾಧಿಕಾರಿಯಾಗಿರತಕ್ಕದ್ದಲ್ಲ.

(4) ಮರಣ, ರಾಜೀನಾಮೆ ಅಥವಾ ಅನ್ಯಥಾ ಕಾರಣಕ್ಕಾಗಿ ಯಾವುದೇ ಖಾಲಿಸ್ಥಾನವು ಉಂಟಾದ ಸಂದರ್ಭದಲ್ಲಿ, ಸರ್ಕಾರವು ಅಂಥ ಸದಸ್ಯನ ಕಾಲಾವಧಿಯ ಉಳಿದ ಅವಧಿಗಾಗಿ ಒಬ್ಬ ಸದಸ್ಯನನ್ನು ನೇಮಿಸಬಹುದು.

(5) ಜಿಲ್ಲಾ ಧಾರ್ಮಿಕ ಪರಿಷತ್ತು, ಸಮಾಲೋಚನೆಯ ಉದ್ದೇಶಕ್ಕಾಗಿ, ಅದರ ಸಭೆಗೆ, ಪರಿಣತಿ ಮತ್ತು ವಿಶೇಷ ಜ್ಞಾನವುಳ್ಳ ಅಥವಾ ಯಾವುದೇ ವಿಷಯದಲ್ಲಿ ತಜ್ಞನಾಗಿರುವ ಯಾವೊಬ್ಬ ವ್ಯಕ್ತಿಯನ್ನು ಆಹ್ವಾನಿಸಬಹುದು ಮತ್ತು ಪ್ರತಿಯೊಬ್ಬ ಅಂಥ ವ್ಯಕ್ತಿಯು ನಿಯಮಿಸಬಹುದಾದ ಅಂಥ ಭತ್ಯೆ ಅರ್ಹನಾಗಿರತಕ್ಕದ್ದು.

(6) ಸರ್ಕಾರವು, ಅಧಿಸೂಚನೆಯ ಮೂಲಕ, ನಿಯಮಗಳನ್ನು ರೂಪಿಸುವ ಅಧಿಕಾರವನ್ನು ಹೊರತುಪಡಿಸಿ, ಈ ಅಧಿನಿಯಮದ ಉಪಬಂಧಗಳಡಿಯಲ್ಲಿ ತನ್ನ ಯಾವುದೇ ಅಧಿಕಾರಗಳು ಹಾಗೂ ಪ್ರಕಾರ್ಯಗಳನ್ನು ಜಿಲ್ಲಾ ಧಾರ್ಮಿಕ ಪರಿಷತ್ತಿಗೆ ಪ್ರತಿಯೋಜಿಸಬಹುದು.

(7) ಅಧ್ಯಕ್ಷನ ಗೈರುಹಾಜರಿಯಲ್ಲಿ, ಉಪಾಧ್ಯಕ್ಷನು ಜಿಲ್ಲಾ ಧಾರ್ಮಿಕ ಪರಿಷತ್ತಿನ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

(8) ಜಿಲ್ಲಾ ಧಾರ್ಮಿಕ ಪರಿಷತ್ತಿನ ನಾಮನಿರ್ದೇಶಿತ ಸದಸ್ಯರ ಗೈರುಹಾಜರಿಯಲ್ಲಿ ಉಳಿದ ಸದಸ್ಯರು ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸತಕ್ಕದ್ದು.

(9) ಜಿಲ್ಲಾ ಧಾರ್ಮಿಕ ಪರಿಷತ್ತಿನ ಸಂಬಂಧದಲ್ಲಿನ ಅಥವಾ ಅದಕ್ಕೆ ಮಾಡುವ ಎಲ್ಲಾ ಪತ್ರವ್ಯವಹಾರಗಳು, ಜಿಲ್ಲಾ ಧಾರ್ಮಿಕ ಪರಿಷತ್ತಿನ ಕಾರ್ಯದರ್ಶಿಯಿಂದ ಅಥವಾ ಅವರಿಗೆ ಮಾಡತಕ್ಕದ್ದು ಮತ್ತು ಇದು ದಾವೆ ಹೂಡುವ ಅಥವಾ ದಾವೆಗೆ ಒಳಗಾಗುವ ಅಧಿಕಾರವನ್ನೂ ಒಳಗೊಳ್ಳುತ್ತದೆ.

**21ಎ. ಜಿಲ್ಲಾ ಧಾರ್ಮಿಕ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** (1) ಜಿಲ್ಲಾ ಧಾರ್ಮಿಕ ಪರಿಷತ್ತು, ನಿಯಮಿಸಬಹುದಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳು ಹಾಗೂ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(2) ಜಿಲ್ಲಾ ಧಾರ್ಮಿಕ ಪರಿಷತ್ತು, (1)ನೇ ಉಪ ಪ್ರಕರಣದಡಿಯಲ್ಲಿನ ಅಧಿಕಾರಗಳು, ಕರ್ತವ್ಯಗಳು ಮತ್ತು ಪ್ರಕಾರ್ಯಗಳಿಗೆ ಹೆಚ್ಚುವರಿಯಾಗಿ,–

(ಎ) ಒಂದು ಲಕ್ಷ ರೂಪಾಯಿಗಳು ಮತ್ತು ಅದಕ್ಕಿಂತ ಮೇಲ್ಪಟ್ಟು ಆದರೆ ಹತ್ತು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಒಟ್ಟು ವಾರ್ಷಿಕ ಆದಾಯವನ್ನು ಹೊಂದಿರುವ ಅಧಿಸೂಚಿತ ಸಂಸ್ಥೆಗಳಿಗೆ ವ್ಯವಸ್ಥಾಪನಾ ಸಮಿತಿಯನ್ನು ರಚಿಸುವ,

(ಬಿ) 28ನೇ ಪ್ರಕರಣದಡಿಯಲ್ಲಿ ಉಪಬಂಧಿಸಲಾದಂತೆ ಒಂದು ಲಕ್ಷ ರೂಪಾಯಿಗಳು ಮತ್ತು ಅದಕ್ಕಿಂತ ಮೇಲ್ಪಟ್ಟು ಆದರೆ ಹತ್ತು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಆದಾಯವನ್ನು ಹೊಂದಿರುವ ಅಧಿಸೂಚಿತ ಸಂಸ್ಥೆಗಳ ವ್ಯವಸ್ಥಾಪನಾ ಸಮಿತಿಯನ್ನು ವಿಸರ್ಜಿಸುವ,

– ಅಧಿಕಾರವನ್ನು ಹೊಂದಿರತಕ್ಕದ್ದು.

(3) ಜಿಲ್ಲಾ ಧಾರ್ಮಿಕ ಪರಿಷತ್ತಿನ ಅಧಿಕಾರ ವ್ಯಾಪ್ತಿಯೊಳಗೆ ಬರುವ ವಿವಾದಗಳನ್ನು, ಪರಿಷತ್ತಿನ ನ್ಯಾಯಿಕ ಸದಸ್ಯ ಹಾಗೂ ಕಾರ್ಯದರ್ಶಿಯನ್ನು ಒಳಗೊಂಡಂಥ ನ್ಯಾಯಾಧಿಕರಣವು ನಿರ್ಣಯಿಸತಕ್ಕದ್ದು. ಅವರಲ್ಲಿ ಯಾವುದೇ ಭಿನ್ನಾಭಿಪ್ರಾಯವಿದ್ದಲ್ಲಿ, ವಿವಾದವನ್ನು ಜಿಲ್ಲಾ ಧಾರ್ಮಿಕ ಪರಿಷತ್ತು ನಿರ್ಧರಿಸತಕ್ಕದ್ದು.

**21ಬಿ. ಧಾರ್ಮಿಕ ಪರಿಷತ್ತಿನ ಸದಸ್ಯರ ಅರ್ಹತೆಗಳು ಮತ್ತು ಅನರ್ಹತೆಗಳು.–** (1) ರಾಜ್ಯ ಧಾರ್ಮಿಕ ಪರಿಷತ್ತು ಮತ್ತು ಜಿಲ್ಲಾ ಧಾರ್ಮಿಕ ಪರಿಷತ್ತಿನ ಸದಸ್ಯನು ಹಿಂದೂ ಆಗಿರತಕ್ಕದ್ದು ಹಾಗೂ ಆತನು, ಅಂಥ ಧರ್ಮವನ್ನು ಅನುಸರಿಸುತ್ತಿರುವುದು ನಿಂತುಹೋದಾಗ ಪದದಲ್ಲಿರುವುದೂ ನಿಂತುಹೋಗತಕ್ಕದ್ದು.

(2) ಒಬ್ಬ ವ್ಯಕ್ತಿಯು,–

(ಎ) ಅವನು ಅವಿಯುಕ್ತ ದಿವಾಳಿಯಾಗಿದ್ದರೆ; ಅಥವಾ

(ಬಿ) ಅವನು ಅಸ್ವಸ್ಥಚಿತ್ತನಾಗಿದ್ದು ಮತ್ತು ಸಕ್ಷಮ ನ್ಯಾಯಾಲಯದಿಂದ ಹಾಗೆಂದು ಘೋಷಿಸಲಾಗಿದ್ದರೆ; ಅಥವಾ

(ಸಿ) ನೈತಿಕ ಅಧಃಪತನವನ್ನು ಒಳಗೊಳ್ಳುವ ಒಂದು ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಶಿಕ್ಷಿತನಾಗಿದ್ದರೆ; ಅಥವಾ

(ಡಿ) ಯಾವುದೇ ಸಮಯದಲ್ಲಿ ಹಿಂದೂ ಧಾರ್ಮಿಕ ಸಂಸ್ಥೆಗಳ ಹಿತಾಸಕ್ತಿಗೆ ವಿರುದ್ಧವಾಗಿ ವರ್ತಿಸಿದ್ದರೆ; ಅಥವಾ

(ಇ) ಅವನು ಮದ್ಯಪಾನ ಅಥವಾ ಮಾದಕ ದ್ರವ್ಯ ಸೇವನೆಯ ದುರ್ವ್ಯಸನಿಯಾಗಿದ್ದರೆ ಅಥವಾ ಜೂಜಾಡುವವನಾಗಿದ್ದರೆ,

– ಪರಿಷತ್ತಿನ ಸದಸ್ಯನಾಗಿ ನೇಮಕಗೊಳ್ಳಲು ಅಥವಾ ಸದಸ್ಯನಾಗಿ ಮುಂದುವರೆಯಲು ಅನರ್ಹನಾಗಿರತಕ್ಕದ್ದು.

**21ಸಿ. ರಾಜ್ಯ ಧಾರ್ಮಿಕ ಪರಿಷತ್ತಿನ ಮತ್ತು ಜಿಲ್ಲಾ ಧಾರ್ಮಿಕ ಪರಿಷತ್ತಿನ ಸದಸ್ಯರನ್ನು ತೆಗೆದುಹಾಕುವುದು ಮತ್ತು ಅನರ್ಹಗೊಳಿಸುವುದು.–** ರಾಜ್ಯ ಸರ್ಕಾರವು, ರಾಜ್ಯ ಧಾರ್ಮಿಕ ಪರಿಷತ್ತಿನ ಅಧಿಕಾರೇತರ ಸದಸ್ಯನನ್ನು, ಅಂಥ ಆರೋಪಗಳ ಮೇಲೆ ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ನಂತರ ರುಜುವಾತಾದ ದುರ್ನಡತೆ ಮತ್ತು ದುರ್ವರ್ತನೆಗಾಗಿ ತೆಗೆದುಹಾಕಬಹುದು ಅಥವಾ ಅನರ್ಹಗೊಳಿಸಬಹುದು.

**21ಡಿ. ರಾಜ್ಯ ಧಾರ್ಮಿಕ ಪರಿಷತ್ತು ಮತ್ತು ಜಿಲ್ಲಾ ಧಾರ್ಮಿಕ ಪರಿಷತ್ತಿನ ಸಭೆ.–** (1) ರಾಜ್ಯ ಧಾರ್ಮಿಕ ಪರಿಷತ್ತು ಮತ್ತು ಜಿಲ್ಲಾ ಧಾರ್ಮಿಕ ಪರಿಷತ್ತಿನ ನಿಯತಕಾಲಿಕ ಸಭೆಗಳನ್ನು ನಿಯಮಿಸಬಹುದಾದಂಥ ಮಧ್ಯಂತರ ಅವಧಿಗಳಲ್ಲಿ ನಡೆಸತಕ್ಕದ್ದು.

(2) ರಾಜ್ಯ ಧಾರ್ಮಿಕ ಪರಿಷತ್ತು ಮತ್ತು ಜಿಲ್ಲಾ ಧಾರ್ಮಿಕ ಪರಿಷತ್ತಿನ ಸದಸ್ಯರಿಗೆ ಸಂದಾಯ ಮಾಡಬೇಕಾದ ಉಪವೇಶನ ಶುಲ್ಕ ಮತ್ತು ಭತ್ಯೆಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

**21ಇ. ರಾಜ್ಯ ಸರ್ಕಾರದಿಂದ ನಿಯಂತ್ರಣ.–** ರಾಜ್ಯ ಸರ್ಕಾರವು, ರಾಜ್ಯ ಧಾರ್ಮಿಕ ಪರಿಷತ್ತಿನ ಮತ್ತು ಜಿಲ್ಲಾ ಧಾರ್ಮಿಕ ಪರಿಷತ್ತಿನ ಚಟುವಟಿಕೆಗಳು ಹಾಗೂ ವ್ಯವಹಾರಗಳ ಮೇಲೆ ಸಾಮಾನ್ಯ ಆಡಳಿತಾತ್ಮಕ ಹಾಗೂ ಮೇಲ್ವಿಚಾರಣೆಯ ನಿಯಂತ್ರಣವನ್ನು ಹೊಂದಿರತಕ್ಕದ್ದು.

**21ಎಫ್. ದೊಡ್ಡ ಸಂಸ್ಥೆಯು ಅಥವಾ ಧರ್ಮಾದಾಯ ಸಂಸ್ಥೆಯು ಚಿಕ್ಕ ಅಧಿಸೂಚಿತ ಸಂಸ್ಥೆಯನ್ನು ದತ್ತು ತೆಗೆದುಕೊಳ್ಳುವುದು.–** (1) ವಾರ್ಷಿಕ ಒಟ್ಟು ಆದಾಯವು ಎರಡು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಇರುವ ಅಥವಾ ಅದರ ಉದ್ದೇಶವು ಧಾರ್ಮಿಕ ಅಥವಾ ಧರ್ಮಾದಾಯವಾಗಿರುವ, ಯಾವುದೇ ಅಧಿಸೂಚಿತ ಸಂಸ್ಥೆಯನ್ನು, ರಾಜ್ಯ ಧಾರ್ಮಿಕ ಪರಿಷತ್ತಿನ ಪೂರ್ವಾನುಮೋದನೆಯೊಂದಿಗೆ ಇತರ ದೊಡ್ಡ ಅಧಿಸೂಚಿತ ಸಂಸ್ಥೆ ಅಥವಾ ಘೋಷಿತ ಸಂಸ್ಥೆ ಅಥವಾ ಮಠ ಅಥವಾ ನೋಂದಾಯಿತ ನ್ಯಾಸ ಅಥವಾ ಅಸೋಸಿಯೇಷನ್ ಐದು ವರ್ಷಗಳ ಅವಧಿಗಾಗಿ ದತ್ತು ತೆಗೆದುಕೊಳ್ಳಬಹುದು:

ಪರಂತು, ದತ್ತು ತೆಗೆದುಕೊಳ್ಳುವ ಅವಧಿಯನ್ನು ಯುಕ್ತ ಹಾಗೂ ಉತ್ತಮ ಕಾರಣಗಳಿಗಾಗಿ ರಾಜ್ಯ ಧಾರ್ಮಿಕ ಪರಿಷತ್ತು ವಿಸ್ತರಿಸಬಹುದು.

(2) ದತ್ತು ತೆಗೆದುಕೊಳ್ಳುವ ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು:

ಪರಂತು, ರಾಜ್ಯ ಧಾರ್ಮಿಕ ಪರಿಷತ್ತು, ಸೂಕ್ತ ಕಾರಣಕ್ಕಾಗಿ, ದತ್ತು ತೆಗೆದುಕೊಂಡವರಿಗೆ ಸೂಕ್ತ ನೋಟೀಸನ್ನು ನೀಡಿ ದತ್ತು ತೆಗೆದುಕೊಂಡಿರುವುದನ್ನು ಕೊನೆಗೊಳಿಸಬಹುದು."

**14. 23ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 23ನೇ ಪ್ರಕರಣದಲ್ಲಿ,–

(i) (ಎ) ಖಂಡದಲ್ಲಿ, "ರಾಜ್ಯ ಸರ್ಕಾರದ" ಎಂಬ ಪದಗಳಿಗೆ ಮೊದಲು "ಮೈಸೂರು ಧಾರ್ಮಿಕ ಹಾಗೂ ಧರ್ಮಾದಾಯ ಸಂಸ್ಥೆಗಳ ಅಧಿನಿಯಮ, 1927ರ ಉಪಬಂಧಗಳ ಅಡಿಯಲ್ಲಿ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಸೇರಿಸತಕ್ಕದ್ದು.

(ii) (ಇ) ಖಂಡಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಇ) ಬಾಂಬೆ ಸಾರ್ವಜನಿಕ ನ್ಯಾಸ ಅಧಿನಿಯಮ, 1950ರ ಅಡಿಯಲ್ಲಿ ನೋಂದಣಿಯಾದ ಎಲ್ಲಾ ಹಿಂದೂ ಧಾರ್ಮಿಕ ಸಂಸ್ಥೆಗಳು;

(ಇಇ) ಸಾರ್ವಜನಿಕರಿಂದ ಯಾವುದೇ ಮಾಸಿಕ ಅಥವಾ ವಾರ್ಷಿಕ ಅನುದಾನವನ್ನು ಅಥವಾ ಕರ್ನಾಟಕ ಕೆಲವು ಇನಾಮುಗಳ (ರದ್ಧತಿ) ಅಧಿನಿಯಮ, 1977ರ ಅಡಿಯಲ್ಲಿ ಯಾವುದೇ ಮೊಬಲಗನ್ನು ಪಡೆಯುತ್ತಿರುವ ಎಲ್ಲಾ ಹಿಂದೂ ಧಾರ್ಮಿಕ ಸಂಸ್ಥೆಗಳು."

**15. 24ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 24ನೇ ಪ್ರಕರಣದ (1)ನೇ ಉಪ–ಪ್ರಕರಣದಲ್ಲಿ "ಆಯುಕ್ತರು ಮುಖ್ಯ ನಿಯಂತ್ರಣ ಪ್ರಾಧಿಕಾರವಾಗಿರತಕ್ಕದ್ದು" ಎಂಬ ಪದಗಳಿಗೆ "ರಾಜ್ಯ ಧಾರ್ಮಿಕ ಪರಿಷತ್ತಿನ ಅಧಿಕಾರಗಳು ಹಾಗೂ ಅಧಿಕಾರ ವ್ಯಾಪ್ತಿಗೆ ಒಳಪಟ್ಟು, ಆಯುಕ್ತರು ಮುಖ್ಯ ನಿಯಂತ್ರಣ ಪ್ರಾಧಿಕಾರವಾಗಿರತಕ್ಕದ್ದು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**16. 24ಎ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 24ನೇ ಪ್ರಕರಣದ ನಂತರ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"24ಎ. ಕಾರ್ಯನಿರ್ವಹಣಾಧಿಕಾರಿಯ ನೇಮಕಾತಿ ಮತ್ತು ಪದಾವಧಿ.–** (1) ರಾಜ್ಯ ಸರ್ಕಾರವು ಅಥವಾ ಸಂದರ್ಭಾನುಸಾರ ಆಯುಕ್ತರು, ಅಧಿಸೂಚಿತ ಸಂಸ್ಥೆ ಅಥವಾ ಅಧಿಸೂಚಿತ ಸಂಸ್ಥೆಗಳ ಸಮೂಹಕ್ಕೆ ಯಾವೊಬ್ಬ ಅಧಿಕಾರಿಯನ್ನು ಕಾರ್ಯನಿರ್ವಹಣಾಧಿಕಾರಿಯಾಗಿ ನೇಮಕಮಾಡಬಹುದು.

(2) ಅಧಿಸೂಚಿತ ಸಂಸ್ಥೆಗೆ ನೇಮಕವಾಗಬೇಕಾದ ಕಾರ್ಯನಿರ್ವಹಣಾಧಿಕಾರಿಯ ದರ್ಜೆಯು, ಅಂಥ ಸಂಸ್ಥೆಯ ಆದಾಯವನ್ನು ಅವಲಂಬಿಸಿರಬಹುದಾಗಿದೆ.

(3) ಕಾರ್ಯನಿರ್ವಹಣಾಧಿಕಾರಿಯು, ರಾಜ್ಯ ಸರ್ಕಾರವು ನಿಗದಿಪಡಿಸಬಹುದಾದಂಥ ಅವಧಿಗಳಿಗಾಗಿ ಪದಧಾರಣ ಮಾಡತಕ್ಕದ್ದು ಮತ್ತು ಇವರು ನಿಯಮಿಸಿಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

(4) ಕಾರ್ಯನಿರ್ವಹಣಾಧಿಕಾರಿಯು ಭಾರತ ದಂಡ ಸಂಹಿತೆ, 1860ರ 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರನೆಂದು ಭಾವಿಸತಕ್ಕದ್ದು.

**17. 25ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 25ನೇ ಪ್ರಕರಣದಲ್ಲಿ,–

(i) (1)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಜಿಲ್ಲಾ ಧಾರ್ಮಿಕ ಪರಿಷತ್ತು ಒಂಬತ್ತು ಜನ ಸದಸ್ಯರನ್ನು ಒಳಗೊಂಡ ಒಂದು ವ್ಯವಸ್ಥಾಪನಾ ಸಮಿತಿಯನ್ನು ರಚಿಸತಕ್ಕದ್ದು:

ಪರಂತು, ಧಾರ್ಮಿಕ ವರ್ಗಕ್ಕೆ ಮತ್ತು ಜೈನ, ಬೌದ್ಧ ಹಾಗೂ ಸಿಖ್ಖರಿಗೆ ಸೇರಿದ ಅಧಿಸೂಚಿತ ಸಂಸ್ಥೆಗಳ ಸಂಬಂಧದಲ್ಲಿ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011 ಪ್ರಾರಂಭವಾದ ದಿನದಿಂದ, ತಾವಾಗಿಯೇ ವ್ಯವಸ್ಥಾಪನಾ ಸಮಿತಿಯನ್ನು, ಅವರಲ್ಲಿ ಚಾಲ್ತಿಯಲ್ಲಿರುವ ರೂಢಿ ಹಾಗೂ ಆಚರಣೆಗಳಿಗೆ ಅನುಸಾರವಾಗಿ ರಚಿಸಿಕೊಳ್ಳಬಹುದು ಹಾಗೂ ಅವುಗಳನ್ನು, ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಧಾರ್ಮಿಕ ಪರಿಷತ್ತು ಮಾನ್ಯಗೊಳಿಸತಕ್ಕದ್ದು:

ಮತ್ತು ಪರಂತು, ಕಾನೂನು ಸಮ್ಮತವಾಗಿ ಪದದಲ್ಲಿದ್ದ, ನಿರಸಿತ ಅಧಿನಿಯಮದ ಅಡಿಯಲ್ಲಿ ರಚಿತವಾದ ಅಥವಾ ನೇಮಕಗೊಂಡ ಪ್ರತಿಯೊಂದು ವ್ಯವಸ್ಥಾಪನಾ ಸಮಿತಿಯು ಅಥವಾ ಪಂಚ ಸಮಿತಿಯು ಅಥವಾ ಧರ್ಮದರ್ಶಿ ಸಮಿತಿಯು ಅಥವಾ ವಂಶಪಾರಂಪರ್ಯೇತರ ನ್ಯಾಸಧಾರಿಗಳು ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ (ತಿದ್ದುಪಡಿ) ಅಧಿನಿಯಮ, 2011ರ ಪ್ರಾರಂಭದ ದಿನಾಂಕದಂದು ಆ ಪದದಲ್ಲಿರುವುದು ಮುಕ್ತಾಯವಾಗತಕ್ಕದ್ದು."

(ii) (3)ನೇ ಉಪ ಪ್ರಕರಣದಲ್ಲಿ,–

(ಎ) 'ನಿಯಮಿಸಲಾದ ಪ್ರಾಧಿಕಾರವು' ಪದಕ್ಕೆ "ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಧಾರ್ಮಿಕ ಪರಿಷತ್ತು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) (iii)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(iii) ಇತರೆ ಇಬ್ಬರು ಮಹಿಳೆಯರಾಗಿರಬೇಕು ಮತ್ತು ಉಳಿದವರಲ್ಲಿ ದೇವಸ್ಥಾನದ ಪ್ರದೇಶದಲ್ಲಿ ವಾಸಿಸುವ ವ್ಯಕ್ತಿಗಳ ಪೈಕಿಯಿಂದ ಕೊನೆ ಪಕ್ಷ ಒಬ್ಬರು ಸದಸ್ಯರು."

(ಸಿ) (iii)ನೇ ಉಪ – ಖಂಡದಲ್ಲಿ, ಎರಡನೇ ಪರಂತುಕಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಮತ್ತು ಪರಂತು, ಸಂಯುಕ್ತ ಸಂಸ್ಥೆಯ ಸಂದರ್ಭದಲ್ಲಿ ಹಿಂದೂ ಹಾಗೂ ಇತರೆ ಧರ್ಮಗಳೆರಡರಿಂದಲೂ ಇಬ್ಬರು ಸದಸ್ಯರನ್ನು ನೇಮಕ ಮಾಡಿಕೊಳ್ಳಬಹುದು."

(iii) (4)ನೇ ಉಪ-ಪ್ರಕರಣದಲ್ಲಿ, (ಡಿ) ಉಪ-ಖಂಡವನ್ನು ಬಿಟ್ಟುಬಿಡತಕ್ಕದ್ದು.

**18. 25ಎ ಪ್ರಕರಣದ ಸೇರ್ಪಡೆ.-** ಮೂಲ ಅಧಿನಿಯಮದ 25ನೇ ಪ್ರಕರಣದ ನಂತರ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

**"25ಎ. ವಂಶಪಾರಂಪರ್ಯ ನ್ಯಾಸಧಾರಿಯು ನಿರ್ವಹಿಸುವ ಸಂಸ್ಥೆಗೆ ಸಂಬಂಧಿಸಿದ ಉಪಬಂಧ.-** (1) ವಂಶಪಾರಂಪರ್ಯ ನ್ಯಾಸಧಾರಿಗಳು ಮಾತ್ರವೇ ನಿರ್ವಹಿಸುವ ಅಧಿಸೂಚಿತ ಸಂಸ್ಥೆಗಳ ಸಂಬಂಧದಲ್ಲಿ ವ್ಯವಸ್ಥಾಪನಾ ಸಮಿತಿಯನ್ನು ರಚಿಸತಕ್ಕದ್ದಲ್ಲ. ವ್ಯವಸ್ಥಾಪನೆಯ ಅಧಿಕಾರವು ವಂಶಪಾರಂಪರ್ಯ ನ್ಯಾಸಧಾರಿಯಲ್ಲಿ ನಿಹಿತವಾಗಿರತಕ್ಕದ್ದು.

(2) ವಂಶಪಾರಂಪರ್ಯ ನ್ಯಾಸದ ಪದಕ್ಕೆ ಉತ್ತರಾಧಿಕಾರಿಯಾಗಲು ಯಾವೊಬ್ಬ ಕಾನೂನು ಸಮ್ಮತ ವಾರಸುದಾರನು ಇಲ್ಲದಿದ್ದರೆ, ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರವಾಗಿ, ಜಿಲ್ಲಾ ಧಾರ್ಮಿಕ ಪರಿಷತ್ತು 25ನೇ ಪ್ರಕರಣದ ಅಡಿಯಲ್ಲಿ ಉಪಬಂಧಿಸಲಾದಂತೆ ವ್ಯವಸ್ಥಾಪನಾ ಸಮಿತಿಯನ್ನು ರಚಿಸತಕ್ಕದ್ದು.

(3) ವಂಶಪಾರಂಪರ್ಯ ನ್ಯಾಸಧಾರಿಯ ಪದವು ತಾತ್ಕಾಲಿಕವಾಗಿ ಖಾಲಿಯಾದಾಗ, ಮತ್ತು ಅಂಥ ಪದಕ್ಕೆ ಉತ್ತರಾಧಿಕಾರದ ಹಕ್ಕಿಗೆ ಸಂಬಂಧಪಟ್ಟಂತೆ ವಿವಾದವಿದ್ದರೆ ಮತ್ತು ಅಂಥ ಖಾಲಿ ಸ್ಥಾನವನ್ನು ಕೂಡಲೇ ಭರ್ತಿ ಮಾಡಲು ಸಾಧ್ಯವಿಲ್ಲದಿದ್ದರೆ ಅಥವಾ ಉತ್ತರಾಧಿಕಾರಿಯು ಅಪ್ರಾಪ್ತ ವಯಸ್ಕನಾಗಿದ್ದು ಕಾರ್ಯನಿರ್ವಹಿಸಲು ಸೂಕ್ತ ಮತ್ತು ಇಚ್ಛೆಯುಳ್ಳ ಯಾವೊಬ್ಬ ಪೋಷಕರು ಅವನಿಗೆ ಇಲ್ಲದಿದ್ದರೆ, ಅಥವಾ ಅಂಥ ಪದಕ್ಕೆ ಉತ್ತರಾಧಿಕಾರಿಯಾಗಲು ಯಾರು ಹಕ್ಕು ಹೊಂದಿದ್ದಾರೆ ಎಂಬ ಬಗ್ಗೆ ವಿವಾದವಿದ್ದರೆ, ರಾಜ್ಯ ಧಾರ್ಮಿಕ ಪರಿಷತ್ತು, ಅಸಮರ್ಥತೆಯು ಮುಕ್ತಾಯವಾಗುವವರೆಗೆ ಅಥವಾ ಇನ್ನೊಬ್ಬ ಉತ್ತರಾಧಿಕಾರಿಯು ಅಂಥ ಪದಕ್ಕೆ ಉತ್ತರಾಧಿಕಾರಿಯಾಗಿ ಬರುವವರೆಗೆ ವಂಶ ಪಾರಂಪರ್ಯ ನ್ಯಾಸಧಾರಿಯ ಪದದ ಪ್ರಕಾರ್ಯಗಳನ್ನು ನಿರ್ವಹಿಸಲು ಒಬ್ಬ ಸೂಕ್ತ ವ್ಯಕ್ತಿಯನ್ನು ನೇಮಕ ಮಾಡಬಹುದು:

ಪರಂತು, ಯಾವುದೇ ನೇಮಕವನ್ನು ಮಾಡುವಾಗ, ರಾಜ್ಯ ಧಾರ್ಮಿಕ ಪರಿಷತ್ತು, ಸದರಿ ಕುಟುಂಬವು, ಉತ್ತರಾಧಿಕಾರಕ್ಕೆ ಯಾವುದೇ ಹಕ್ಕನ್ನು ಹೊಂದಿದ್ದರೆ, ಅಂಥ ಕುಟುಂಬದ ಸದಸ್ಯರ ಕ್ಲೇಮುಗಳಿಗೆ ಸೂಕ್ತ ಗಮನವನ್ನು ನೀಡತಕ್ಕದ್ದು.

**25ಬಿ. ಧರ್ಮಾದಾಯ ದತ್ತಿಗಳ ಆಡಳಿತಕ್ಕೆ ಯೋಜನೆಗಳನ್ನು ಸಿದ್ಧಪಡಿಸಲು ಮತ್ತು ಕೆಲವು ಇತರ ವಿವಾದಗಳನ್ನು ತೀರ್ಮಾನಿಸಲು ಉಪ ಆಯುಕ್ತರ ಅಧಿಕಾರ.-** (1) ಧರ್ಮಾದಾಯ ದತ್ತಿಗಳ ಅಥವಾ ಯಾವುದೇ ಅಧಿಸೂಚಿತ ಸಂಸ್ಥೆಗೆ ಅಥವಾ ಘೋಷಿತ ಸಂಸ್ಥೆಗೆ ಲಗತ್ತಾದ ಒಂದು ದತ್ತಿಯ ಸೂಕ್ತ ಆಡಳಿತದ ಹಿತದೃಷ್ಟಿಯಿಂದ, ಅಂಥ ದತ್ತಿಗಾಗಿ ಒಂದು ಯೋಜನೆಯನ್ನು ಸಿದ್ಧಪಡಿಸತಕ್ಕದ್ದೆಂದು ಉಪ ಆಯುಕ್ತರಿಗೆ ನಂಬಲು ಕಾರಣವಿದ್ದಾಗ, ಅಥವಾ ಹಿತಾಸಕ್ತಿ ಹೊಂದಿರುವ ಐದಕ್ಕಿಂತ ಕಡಿಮೆ ಇಲ್ಲದ ವ್ಯಕ್ತಿಗಳು, ದತ್ತಿಯ ಸೂಕ್ತ ಆಡಳಿತದ ಹಿತದೃಷ್ಟಿಯಿಂದ, ಅದಕ್ಕೆ ಒಂದು ಯೋಜನೆಯನ್ನು ಸಿದ್ಧಪಡಿಸಬೇಕೆಂದು ತಿಳಿಸುವ ಒಂದು ಲಿಖಿತ ಅರ್ಜಿಯನ್ನು ಸಲ್ಲಿಸಿದಾಗ, ಉಪ ಆಯುಕ್ತರು, ನ್ಯಾಸಧಾರಿಯೊಂದಿಗೆ ಅಥವಾ ವ್ಯವಸ್ಥಾಪನಾ ಸಮಿತಿಯೊಂದಿಗೆ ಅಥವಾ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳೊಂದಿಗೆ ಸಮಾಲೋಚನೆಯನ್ನು ನಡೆಸಿದ ತರುವಾಯ ಹಾಗೆ ಮಾಡುವುದು ಅವಶ್ಯವೆಂದು ಅಥವಾ ಅಪೇಕ್ಷಣೀಯವೆಂದು ಅವರಿಗೆ ಮನದಟ್ಟಾದರೆ, ಅವರು, ಆದೇಶದ ಮೂಲಕ ಅಂಥ ಧರ್ಮಾದಾಯ ದತ್ತಿಯ ಅಥವಾ ದತ್ತಿಯ ಆಡಳಿತಕ್ಕೆ ಒಂದು ಯೋಜನೆಯನ್ನು ಸಿದ್ಧಪಡಿಸತಕ್ಕದ್ದು.

(2) ಈ ಪ್ರಕರಣದ ಅಡಿಯಲ್ಲಿ ಧರ್ಮಾದಾಯ ದತ್ತಿಗಳ ಆಡಳಿತಕ್ಕಾಗಿ ಸಿದ್ಧಪಡಿಸಲಾದ ಯೋಜನೆಯು,-

(i) ಅಂಥ ಧರ್ಮಾದಾಯ ದತ್ತಿಗಳ ಆಡಳಿತದಲ್ಲಿ ನೆರವಾಗುವ ಉದ್ದೇಶಕ್ಕಾಗಿ ಒಂದು ನಿಕಾಯವನ್ನು ರಚಿಸುವುದಕ್ಕಾಗಿ;

(ii) ಅಂಥ ದತ್ತಿಗಳಲ್ಲಿ ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಗಳ ಪೈಕಿಯಿಂದ ಅಂಥ ಸಮಿತಿಯ ಸದಸ್ಯರನ್ನು ಆಯ್ಕೆ ಮಾಡುವ ವಿಧಾನಕ್ಕಾಗಿ;

(iii) ಸಮಿತಿಯ ಅಧಿಕಾರಗಳು ಮತ್ತು ಕರ್ತವ್ಯಗಳನ್ನು ವ್ಯಾಖ್ಯಾನಿಸುವುದಕ್ಕಾಗಿ;

- ಕೆಲವು ಉಪಬಂಧಗಳನ್ನು ಒಳಗೊಂಡಿರತಕ್ಕದ್ದು.

(3) ಉಪ ಆಯುಕ್ತರು ದತ್ತಿಯ ಸ್ವತ್ತುಗಳನ್ನು ನಿರ್ಧರಿಸುವುದು ಮತ್ತು ಅಂಥ ಸ್ವತ್ತುಗಳ ಪಟ್ಟಿಯನ್ನು ಯೋಜನೆಗೆ ಅನುಸೂಚಿಯಾಗಿ ಲಗತ್ತಿಸತಕ್ಕದ್ದು.

(4) ಉಪ ಆಯುಕ್ತರು, ನ್ಯಾಸಧಾರರು ಅಥವಾ ಸಮಿತಿಯೊಂದಿಗೆ ಸಮಾಲೋಚಿಸಿದ ತರುವಾಯ, ಯಾವುದೇ ಕಾಲದಲ್ಲಿ, ದತ್ತಿಗೆ ಸಂಬಂಧಪಟ್ಟಂತೆ, (1)ನೇ ಉಪಪ್ರಕರಣದ ಅಡಿಯಲ್ಲಿ ಜಾರಿಯಲ್ಲಿರುವ ಮತ್ತು ಸಿದ್ಧಪಡಿಸಲಾಗಿರುವ ಯಾವುದೇ ಯೋಜನೆಯನ್ನು ಅಥವಾ ಯಾವುದೇ ನ್ಯಾಯಾಲಯಗಳ ಅಥವಾ ಯಾವುದೇ ಈ ಹಿಂದಿನ ಅಧಿನಿಯಮಗಳ ಮೂಲಕ ಸಿದ್ಧಪಡಿಲಾಗಿರುವ ಅಥವಾ ಮಾರ್ಪಡಿಸಲಾಗಿರುವ ಜಾರಿಯಲ್ಲಿರುವ ಯಾವುದೇ ಯೋಜನೆಯನ್ನು ಆದೇಶದ ಮೂಲಕ ಮಾರ್ಪಡಿಸಬಹುದು ಅಥವಾ ರದ್ದುಪಡಿಸಬಹುದು:

ಪರಂತು, ಈ ಹಿಂದೆ ಸಿದ್ಧಪಡಿಸಲಾಗಿದ್ದ ಅಥವಾ ಮಾರ್ಪಡಿಸಲಾಗಿದ್ದ ಜಾರಿಯಲ್ಲಿರುವ ಯೋಜನೆಯ ಅಂಥ ರದ್ದತಿಯನ್ನು ಅಥವಾ ಮಾರ್ಪಾಡನ್ನು, ಉಪ ಆಯುಕ್ತರು ವಿಧಿಸಬಹುದಾದಂಥ ಷರತ್ತುಗಳು ಮತ್ತು ನಿರ್ಬಂಧಗಳಿಗೆ ಒಳಪಟ್ಟು ಮಾತ್ರ ಮಾಡತಕ್ಕದ್ದು.

(5) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಯಾವುದೇ ಅಂಥ ಯೋಜನೆಯು, ಈ ಅಧಿನಿಯಮದ ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಉಪಪಬಂಧಗಳಿಗೆ ಅಸಂಗತವಾಗಿದೆಯೆಂದು ಉಪ ಆಯುಕ್ತರಿಗೆ ಮನದಟ್ಟಾದರೆ, ಅವರು, ಈ ಅಧಿನಿಯಮದ ಮತ್ತು ಅದರ

ಅಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳೊಂದಿಗೆ ಅನುರೂಪವಾಗಿರುವಂತೆ ಮಾಡಲು ಅವಶ್ಯವಾಗಬಹುದಾದಂಥ ರೀತಿಯಲ್ಲಿ, ಅದನ್ನು ಯಾವುದೇ ಕಾಲದಲ್ಲಿ, ಮಾರ್ಪಡಿಸಬಹುದು.

(6) (i) ಒಂದು ನಿರ್ದಿಷ್ಟ ಸ್ವತ್ತು, ಅಧಿನಿಯಮದ ಅಡಿಯಲ್ಲಿ ಅಧಿಸೂಚಿತ ಸಂಸ್ಥೆಗಳ ಅಥವಾ ಘೋಷಿತ ಸಂಸ್ಥೆಯ ಸ್ವತ್ತಾಗಿದೆಯೇ ಎಂಬ ಬಗ್ಗೆ; ಅಥವಾ

(ii) ಯಾವುದೇ ಸ್ವತ್ತು ಅಥವಾ ಹಣವು ಧಾರ್ಮಿಕ ದತ್ತಿಯಾಗಿದೆಯೇ ಅಥವಾ ನಿರ್ದಿಷ್ಟ ದತ್ತಿಯಾಗಿದೆಯೇ ಎಂಬ ಬಗ್ಗೆ; ಅಥವಾ

(iii) ಯಾವೊಬ್ಬ ಅರ್ಚಕ ಅಥವಾ ದೇವಸ್ಥಾನ ನೌಕರನು ಯಾವುದೇ ಅಧಿಸೂಚಿತ ಸಂಸ್ಥೆಯಲ್ಲಿ ಅಥವಾ ಘೋಷಿತ ಸಂಸ್ಥೆಯಲ್ಲಿ ವಂಶಪಾರಂಪರ್ಯ ಹಕ್ಕಿನ ಆಧಾರದ ಮೇಲೆ ಪದವನ್ನು ಹೊಂದಿರುವನೇ ಅಥವಾ ಹೊಂದಿದ್ದನೇ ಎಂಬ ಬಗ್ಗೆ; ಅಥವಾ

(iv) ಯಾವೊಬ್ಬ ವ್ಯಕ್ತಿಯು ರೂಢಿಯ ಮೂಲಕ ಅಥವಾ ಅನ್ಯಥಾ ಯಾವುದೇ ಧಾರ್ಮಿಕ ಸಂಸ್ಥೆಯಲ್ಲಿ ಯಾವುದೇ ಮನ್ನಣೆ, ಉಪಲಬ್ಧಿಗಳನ್ನು ಅಥವಾ ಪರಿಲಬ್ಧಿಗಳನ್ನು ಪಡೆಯಲು ಹಕ್ಕು ಹೊಂದಿರುವನೇ; ಮತ್ತು ಅಧಿಸೂಚಿತ ಅಥವಾ ಘೋಷಿತ ಸಂಸ್ಥೆಯ ಹಾಲಿ ಆಚರಣೆ ಯಾವುದಿದೆ ಎಂಬ ಬಗ್ಗೆ; ಅಥವಾ

(v) ಯಾವುದೇ ಸಂಸ್ಥೆಯು ಅಥವಾ ದತ್ತಿಯು ಪೂರ್ಣವಾಗಿ ಅಥವಾ ಭಾಗಶಃ ಧಾರ್ಮಿಕ ಅಥವಾ ಜಾತ್ಯಾತೀತ ಸ್ವರೂಪದ್ದಾಗಿದೆಯೇ ಮತ್ತು ಯಾವುದೇ ಸ್ವತ್ತನ್ನು ಅಥವಾ ಹಣವನ್ನು ಪೂರ್ಣವಾಗಿ ಅಥವಾ ಭಾಗಶಃ ಧಾರ್ಮಿಕ ಅಥವಾ ಜಾತ್ಯತೀತ ಉದ್ದೇಶಕ್ಕಾಗಿ ನೀಡಲಾಗಿದೆಯೇ ಎಂಬ ಬಗ್ಗೆ,

(vi) ಯಾವುದೇ ಸ್ವತ್ತನ್ನು ಅಥವಾ ಹಣವನ್ನು ಭಾಗಶಃ ಧಾರ್ಮಿಕ ಮತ್ತು ಭಾಗಶಃ ಜಾತ್ಯತೀತ ಸ್ವರೂಪದ ಸಂಸ್ಥೆಗೆ ಬೆಂಬಲವಾಗಿ ಅಥವಾ ಅಂಥ ಸಂಸ್ಥೆಗೆ ಸಂಬಂಧಪಟ್ಟ ಯಾವುದೇ ಸೇವೆಯ ಅಥವಾ ಧರ್ಮಾದಾಯದ ನಿರ್ವಹಣೆಗಾಗಿ ಅಥವಾ ಭಾಗಶಃ ಧಾರ್ಮಿಕ ಮತ್ತು ಭಾಗಶಃ ಜಾತ್ಯತೀತ ಸ್ವರೂಪದ್ದಾಗಿರುವ ಧರ್ಮಾದಾಯದ ನಿರ್ವಹಣೆಗಾಗಿ ನೀಡಲಾಗಿರುವಲ್ಲಿ, ನೀಡಲಾದ ಯಾವುದೇ ಸ್ವತ್ತನ್ನು ಅಥವಾ ಹಣವನ್ನು ಭಾಗಶಃ ಧಾರ್ಮಿಕ ಮತ್ತು ಭಾಗಶಃ ಜಾತ್ಯತೀತ ಉದ್ದೇಶಗಳಿಗಾಗಿ ಹಂಚಿಕೆ ಮಾಡಲಾಗಿರುವಲ್ಲಿ, ಅಂಥ ಸ್ವತ್ತಿನ ಅಥವಾ ಹಣದ ಎಷ್ಟು ಭಾಗವನ್ನು ಧರ್ಮಾರ್ಥ ಉದ್ದೇಶಕ್ಕಾಗಿ ಹಂಚಿಕೆ ಮಾಡತಕ್ಕದ್ದು ಎಂಬ ಬಗ್ಗೆ; ಅಥವಾ

(vii) ಒಟ್ಟು ಒಂದು ಲಕ್ಷ ಮತ್ತು ಅದಕ್ಕಿಂತ ಹೆಚ್ಚು ರೂಪಾಯಿಗಳು ಆದರೆ ಹತ್ತು ಲಕ್ಷ ರೂಪಾಯಿಗಳಿಗಿಂತ ಕಡಿಮೆ ವಾರ್ಷಿಕ ಆದಾಯವನ್ನು ಹೊಂದಿರುವ ಅಧಿಸೂಚಿತ ಸಂಸ್ಥೆಗಳ ಸಂಬಂಧದಲ್ಲಿ ದಿತ್ತಂ ಮತ್ತು ಸೇವಾ ಪಟ್ಟಿಗೆ ಮಂಜೂರಾತಿ ನೀಡುವ ಬಗ್ಗೆ,

(viii) ಅಧಿಸೂಚಿತ ಸಂಸ್ಥೆಯ ನೌಕರನ ಮತ್ತು ವ್ಯವಸ್ಥಾಪನಾ ಸಮಿತಿಯ ನಡುವಿನ ಯಾವುದೇ ವಿವಾದದ ಬಗ್ಗೆ,

ಯಾವುದೇ ಪ್ರಶ್ನೆ ಉದ್ಭವಿಸಿದರೆ, ಉಪ ಆಯುಕ್ತನು ಸಂಬಂಧಿಸಿದ ಪಕ್ಷಕಾರರ ಅಹವಾಲನ್ನು ಕೇಳಿದ ತರುವಾಯ ಆದೇಶದ ಮೂಲಕ ಅದನ್ನು ತೀರ್ಮಾನಿಸತಕ್ಕದ್ದು.

(7) ಉಪ ಆಯುಕ್ತನು ಮೇಲೆ ಹೇಳಿದ ಯಾವುದೇ ಉಪಬಂಧಗಳ ಅಡಿಯಲ್ಲಿ ಹೊರಡಿಸಿದ ಯಾವುದೇ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಒಂದು ತಿಂಗಳೊಳಗಾಗಿ ಆಯುಕ್ತನಿಗೆ ಅಪೀಲನ್ನು ಸಲ್ಲಿಸತಕ್ಕದ್ದು.

(8) ಆಯುಕ್ತನು, ಬಾಧಿತ ವ್ಯಕ್ತಿಯ ಮತ್ತು ವಾದಿಸುವ ಇತರ ಪಕ್ಷಕಾರರ ಅಹವಾಲನ್ನು ಕೇಳದ ತರುವಾಯ, ಕಾನೂನಿಗೆ ಅನುಸಾರವಾಗಿ ಸೂಕ್ತ ಆದೇಶವನ್ನು ಹೊರಡಿಸತಕ್ಕದ್ದು."

**19. 26ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 26ನೇ ಪ್ರಕರಣದಲ್ಲಿ,–

(1) (1)ನೇ ಉಪ ಪ್ರಕರಣದಲ್ಲಿ "ನಿಯಮಿಸಲಾದ ಪ್ರಾಧಿಕಾರದ" ಎಂಬ ಪದಗಳಿಗೆ "ರಾಜ್ಯ ಧಾರ್ಮಿಕ ಪರಿಷತ್ತಿನ ಅಥವಾ ಸಂದರ್ಭಾನುಸಾರ ಜಿಲ್ಲಾ ಧಾರ್ಮಿಕ ಪರಿಷತ್ತಿನ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(2) (4)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(4) ಒಬ್ಬನಿಗಿಂತ ಹೆಚ್ಚು ವಂಶಪಾರಂಪರ್ಯ ನ್ಯಾಸಧಾರಿಯಿಂದ ಅಥವಾ ಸಂಸ್ಥಾಪಕ ನ್ಯಾಸಧಾರಿಯಿಂದ ನಿರ್ವಹಿಸಲಾಗುತ್ತಿರುವ ಅಧಿಸೂಚಿತ ಸಂಸ್ಥೆಗಳ ಸಂದರ್ಭದಲ್ಲಿ, ನಿಯಮಿಸಬಹುದಾದಂಥ ಪ್ರಕ್ರಿಯೆಗೆ ಅನುಸಾರವಾಗಿ ಅಧ್ಯಕ್ಷನನ್ನು ಚುನಾಯಿಸತಕ್ಕದ್ದು."

**20. 28ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 28ನೇ ಪ್ರಕರಣದಲ್ಲಿ,–

(1) (1)ನೇ ಉಪಪ್ರಕರಣದಲ್ಲಿ,–

(ಎ) "ನಿಯಮಿಸಲಾದ ಪ್ರಾಧಿಕಾರಕ್ಕೆ" ಎಂಬ ಪದಗಳಿಗೆ "ರಾಜ್ಯ ಧಾರ್ಮಿಕ ಪರಿಷತ್ತಿಗೆ ಅಥವಾ ಸಂದರ್ಭಾನುಸಾರ ಜಿಲ್ಲಾ ಧಾರ್ಮಿಕ ಪರಿಷತ್ತಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ಬಿ) "ಸಮಿತಿಯನ್ನು" ಎಂಬ ಪದಕ್ಕೆ ಮೊದಲು "ಸದಸ್ಯ ಅಥವಾ ವಂಶಪಾರಂಪರ್ಯ ನ್ಯಾಸಧಾರಿಯೂ ಒಳಗೊಂಡಂತೆ ವ್ಯವಸ್ಥಾಪನಾ" ಎಂಬ ಪದಗಳನ್ನು ಸೇರಿಸತಕ್ಕದ್ದು;

(2) (2)ನೇ ಉಪ ಪ್ರಕರಣದಲ್ಲಿ,–

(ಎ) "ನಿಯಮಿಸಲಾದ ಪ್ರಾಧಿಕಾರವು" ಎಂಬ ಪದಗಳಿಗೆ "ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರ ಜಿಲ್ಲಾ ಧಾರ್ಮಿಕ ಪರಿಷತ್ತು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ಬಿ) "ಸಮಿತಿ" ಎಂಬ ಪದಗಳಿಗೆ ಮೊದಲು ಅವು ಕಂಡು ಬರುವ ಕಡೆಗಳಲೆಲ್ಲ, "ಸದಸ್ಯ ಅಥವಾ ವಂಶಪಾರಂಪರ್ಯ ನ್ಯಾಸಧಾರಿಯೂ ಒಳಗೊಂಡು" ಎಂಬ ಪದಗಳನ್ನು ಸೇರಿಸತಕ್ಕದ್ದು;

(3) (3)ನೇ ಉಪ ಪ್ರಕರಣದಲ್ಲಿ,–

(ಎ) "ನಿಯಮಿಸಲಾದ ಪ್ರಾಧಿಕಾರವು" ಎಂಬ ಪದಗಳಿಗೆ "ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರ ಜಿಲ್ಲಾ ಧಾರ್ಮಿಕ ಪರಿಷತ್ತು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ಬಿ) "ಸಮಿತಿಯನ್ನು" ಎಂಬ ಪದಗಳಿಗೆ ಮೊದಲು, "ಸದಸ್ಯ ಅಥವಾ ವಂಶಪಾರಂಪರ್ಯ ನ್ಯಾಸಧಾರಿಯೂ ಒಳಗೊಂಡು" ಎಂಬ ಪದಗಳನ್ನು ಸೇರಿಸತಕ್ಕದ್ದು;

(4) (4)ನೇ ಉಪ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು:–

**21. 29ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 29ನೇ ಪ್ರಕರಣದಲ್ಲಿ,–

(ಎ) "ನಿಯಮಿಸಲಾದ ಪ್ರಾಧಿಕಾರವು" ಎಂಬ ಪದಗಳಿಗೆ "ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಜಿಲ್ಲಾ ಧಾರ್ಮಿಕ ಪರಿಷತ್ತು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ಬಿ) ಈ ಮುಂದಿನ ಪರಂತುಕವನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಧಾರ್ಮಿಕ ಪರಿಷತ್ತು ಅಥವಾ ಜಿಲ್ಲಾ ಧಾರ್ಮಿಕ ಪರಿಷತ್ತು, ಲಿಖಿತದಲ್ಲಿ ಕಾರಣಗಳನ್ನು ದಾಖಲಿಸಿ, ಆದೇಶದ ಮೂಲಕ, ಸದರಿ ಅವಧಿಯನ್ನು, ಒಂದು ಸಲಕ್ಕೆ ಆರು ತಿಂಗಳನ್ನು ಮೀರದ ಹೆಚ್ಚಿನ ಅವಧಿಗೆ ವಿಸ್ತರಿಸಬಹುದು. ಆದಾಗ್ಯೂ, ಸದರಿ ಅವಧಿಯು ಒಟ್ಟಾರೆ ಒಂದು ವರ್ಷವನ್ನು ಮೀರತಕ್ಕದ್ದಲ್ಲ."

**22. 30ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 30ನೇ ಪ್ರಕರಣದಲ್ಲಿ "ನಿಯಮಿಸಲಾದ ಪ್ರಾಧಿಕಾರವು" ಎಂಬ ಪದಗಳಿಗೆ "ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರ ಜಿಲ್ಲಾ ಧಾರ್ಮಿಕ ಪರಿಷತ್ತು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**23. 31ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 31ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"31. ಅಧಿಸೂಚಿತ ಸಂಸ್ಥೆಗಳ ಭೂಮಿ ಮತ್ತು ಇತರ ಸ್ವತ್ತಿನ ಸಮೀಕ್ಷೆ ಮತ್ತು ಪ್ರಕಟಣೆ.–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ರಾಜ್ಯದಲ್ಲಿರುವ ಅಧಿಸೂಚಿತ ಸಂಸ್ಥೆಗಳ ಎಲ್ಲ ಸ್ವತ್ತುಗಳನ್ನು ಸಮೀಕ್ಷೆ ಮಾಡುವ ಉದ್ದೇಶಕ್ಕಾಗಿ ಒಬ್ಬ ದತ್ತಿ ಸಮೀಕ್ಷಾ ಅಧಿಕಾರಿಯನ್ನು ಮತ್ತು ಅವಶ್ಯವಾಗಬಹುದಾದಷ್ಟು ಸಂಖ್ಯೆಯ ಸಹಾಯಕ ದತ್ತಿ ಸಮೀಕ್ಷಾ ಅಧಿಕಾರಿಗಳನ್ನು ನೇಮಕ ಮಾಡಬಹುದು.

(2) ಎಲ್ಲ ಸಹಾಯಕ ದತ್ತಿ ಸಮೀಕ್ಷಾ ಅಧಿಕಾರಿಗಳು, ದತ್ತಿ ಸಮೀಕ್ಷಾ ಅಧಿಕಾರಿಯ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣದ ಅಡಿಯಲ್ಲಿ ತಮ್ಮ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(3) ದತ್ತಿ ಸಮೀಕ್ಷಾ ಅಧಿಕಾರಿಯು, ತಾನು ಅವಶ್ಯವೆಂದು ಪರಿಗಣಿಸಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ, ಪ್ರತಿಯೊಂದು ಅಧಿಸೂಚಿತ ಸಂಸ್ಥೆಯ ಸ್ವತ್ತಿಗೆ ಅಥವಾ ಅದರ ಯಾವುದೇ ಭಾಗಕ್ಕೆ ಸಂಬಂಧಪಟ್ಟಂತೆ, ಈ ಮುಂದಿನ ವಿವರಗಳನ್ನು ಒಳಗೊಂಡಿರುವ ಒಂದು ವರದಿಯನ್ನು ಧರ್ಮಾದಾಯ ಆಯುಕ್ತರ ಮೂಲಕ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು, ಎಂದರೆ:–

(ಎ) ಅಧಿಸೂಚಿತ ಸಂಸ್ಥೆಯ ಪ್ರತಿಯೊಂದು ಸ್ವತ್ತಿನ ಸರ್ವೆ ನಂಬರ್, ವಿಸ್ತೀರ್ಣ, ನಿರ್ಧರಣೆ;

(ಬಿ) ವಸ್ತುವಿನೊಂದಿಗೆ ಯಾವುದಾದರೂ ಇದ್ದರೆ ಸ್ವತ್ತಿನ ಸ್ವರೂಪ ಮತ್ತು ವರ್ಣನೆ;

(ಸಿ) ಅಧಿಸೂಚಿತ ಸಂಸ್ಥೆಗೆ ಪ್ರತಿಯೊಂದು ಸ್ವತ್ತಿನಿಂದ ಬಂದ ಆದಾಯ;

(ಡಿ) ಸ್ವತ್ತಿಗೆ ಸಂಬಂಧಪಟ್ಟಂತೆ ನಿಯಮಿಸಬಹುದಾದಂಥ ಇತರ ವಿವರಗಳು.

(4) ದತ್ತಿ ಸಮೀಕ್ಷಾ ಅಧಿಕಾರಿಯು, ಯಾವುದೇ ವಿವಾದಕ್ಕೆ ಸಂಬಂಧಪಟ್ಟಂತೆ ಯಾವುದೇ ವಿಚಾರಣೆಯನ್ನು ಮಾಡುವಾಗ, ಈ ಮುಂದಿನ ವಿಷಯಗಳ ಸಂಬಂಧದಲ್ಲಿ, ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ ಅಡಿಯಲ್ಲಿ ಸಿವಿಲ್ ನ್ಯಾಯಲಯದಲ್ಲಿ ನಿಹಿತವಾಗಿರುವಂಥವೇ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(ಎ) ಸಾಕ್ಷಿದಾರನನ್ನು ಸಮನ್ ಮಾಡುವುದು ಮತ್ತು ಪರೀಕ್ಷಿಸುವುದು;

(ಬಿ) ಯಾವುದೇ ದಸ್ತಾವೇಜನ್ನು ಸಮನ್ ಮಾಡುವುದು ಮತ್ತು ಹಾಜರುಪಡಿಸುವುದು;

(ಸಿ) ಯಾವುದೇ ಪ್ರಾಧಿಕಾರದಿಂದ ಅಥವಾ ಯಾವುದೇ ಕಚೇರಿಯಿಂದ ಯಾವುದೇ ಸಾರ್ವಜನಿಕ ದಾಖಲೆಯನ್ನು ಕಡ್ಡಾಯವಾಗಿ ಕೋರುವುದು;

(ಡಿ) ಯಾವೊಬ್ಬ ಸಾಕ್ಷಿದಾರರ ಅಥವಾ ಯಾವುದೇ ಲೆಕ್ಕ ಪತ್ರಗಳ ಅಥವಾ ದಾಖಲೆಗಳ ಪರೀಕ್ಷೆಗಾಗಿ ಕಮೀಷನ್ನುಗಳನ್ನು ಹೊರಡಿಸುವುದು;

(ಇ) ಯಾವುದೇ ಸ್ಥಳೀಯ ತಪಾಸಣೆ ಅಥವಾ ಸ್ಥಳೀಯ ತನಿಖೆಯನ್ನು ಮಾಡುವುದು;

(ಎಫ್) ನಿಯಮಿಸಬಹುದಾದ ಅಂಥ ಯಾವುದೇ ಇತರ ವಿಷಯಗಳು.

(5) ಯಾವುದೇ ಅಂಥ ವಿಚಾರಣೆಯು ನಡೆಯುತ್ತಿರುವಾಗ, ಒಂದು ನಿರ್ದಿಷ್ಟ ಸ್ವತ್ತು ಅಧಿಸೂಚಿತ ಸಂಸ್ಥೆಯ ಸ್ವತ್ತಾಗಿದೆಯೇ ಅಥವಾ ಅಲ್ಲವೇ ಎಂಬ ಬಗ್ಗೆ ಯಾವುದೇ ವಿವಾದವು ತಲೆದೋರಿದರೆ, ಹಿತಾಸಕ್ತಿ ಹೊಂದಿರುವ ಪಕ್ಷಕಾರರನ್ನು ವಿಚಾರಣೆ ನಡೆಸಿದ ತರುವಾಯ ಅದನ್ನು ತೀರ್ಮಾನಿಸತಕ್ಕದ್ದು.

(6) ರಾಜ್ಯ ಸರ್ಕಾರವು, ಒಂದು ನಿರ್ದಿಷ್ಟ ಸ್ವತ್ತಿನ ಬಗ್ಗೆ ಎರಡನೇ ಅಥವಾ ತರುವಾಯದ ಸಮೀಕ್ಷೆ ಮಾಡುವಂತೆ ದತ್ತಿ ಸಮೀಕ್ಷಾ ಅಧಿಕಾರಿಗೆ ನಿರ್ದೇಶನ ನೀಡಬಹುದು ಮತ್ತು ಆ ಸ್ವತ್ತಿನ ಪುನರ್ ಸಮೀಕ್ಷೆ ಮಾಡುವಾಗ, ಅವನು, (2)ರಿಂದ (5)ರವರೆಗಿನ ಉಪಪ್ರಕರಣಗಳಲ್ಲಿ ನಿರ್ದಿಷ್ಟ ಪಡಿಸಲಾದ ಪ್ರಕ್ರಿಯೆಗಳನ್ನು ಅನುಸರಿಸತಕ್ಕದ್ದು.

(7) (3)ನೇ ಉಪ ಪ್ರಕರಣದ ಅಥವಾ (6)ನೇ ಉಪಪ್ರಕರಣದ ಅಡಿಯಲ್ಲಿಯ ವರದಿಯನ್ನು ಸ್ವೀಕರಿಸಿದ ತರುವಾಯ, ರಾಜ್ಯ ಸರ್ಕಾರವು, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ (ತಿದ್ದುಪಡಿ) ಅಧಿನಿಯಮ, 2011ರ ಪ್ರಾರಂಭದ ದಿನಾಂಕದಂದು ಅಥವಾ ಆ ವರದಿಯು ಸಂಬಂಧಪಡುವಂಥ ತರುವಾಯದ ದಿನಾಂಕಗಳಂದು, ನಿಯಮಿಸಬಹುದಾದ ಅಂಥ ಇತರ ವಿವರಗಳನ್ನು ಒಳಗೊಂಡಿರುವ, ಎಲ್ಲ ಅಧಿಸೂಚಿತ ಸಂಸ್ಥೆಗಳ ಸ್ವತ್ತುಗಳ ಪಟ್ಟಿಯನ್ನು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು.

(8) (7)ನೇ ಉಪ ಪ್ರಕರಣದ ಅಡಿಯಲ್ಲಿ ಅಂಥ ಪಟ್ಟಿಯನ್ನು ಪ್ರಕಟಿಸಿದ ತರುವಾಯ, ಪ್ರತಿಯೊಂದು ಅಧಿಸೂಚಿತ ಸಂಸ್ಥೆಯು ಭೂಮಿಗಳು, ಕಟ್ಟಡಗಳು, ಖಾಲಿ ನಿವೇಶನಗಳು, ರಚನೆಗಳು, ಚಿನ್ನ, ಬೆಳ್ಳಿಯಂಥ ಬೆಲೆ ಬಾಳುವ ಸಾಮಗ್ರಿಗಳು, ಮೂರ್ತಿಗಳು, ಪಾತ್ರೆಗಳು, ಅಮೂಲ್ಯ ಹರಳುಗಳು, ಪ್ರಾಚ್ಯ ಮಹತ್ವದ ಸಾಮಗ್ರಿಗಳು, ವರ್ಣಚಿತ್ರಗಳು, ಲೋಹ, ತಾಳೆಗರಿಗಳ ಶಾಸನಗಳು ಮತ್ತು ಇತರ ಚರ ಸ್ವತ್ತುಗಳೂ ಸೇರಿದಂತೆ ಸಂಸ್ಥೆಯ ಚರ ಮತ್ತು ಸ್ಥಿರ ಸ್ವತ್ತುಗಳ ಒಂದು ರಿಜಿಸ್ಟರನ್ನು ನಿರ್ವಹಿಸತಕ್ಕದ್ದು, ಮತ್ತು ಅದನ್ನು ಅನುಮೋದನೆಗಾಗಿ ನಿಯಮಿಸಲಾದ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(9) ಅಂಥ ರಿಜಿಸ್ಟರನ್ನು ಅನುಮೋದಿಸಿದ ತರುವಾಯ, ವ್ಯವಸ್ಥಾಪನಾ ಸಮಿತಿ ಅಥವಾ ನ್ಯಾಸಧಾರಿ ಅಥವಾ ಕಾರ್ಯ ನಿರ್ವಾಹಕ ಅಧಿಕಾರಿಯು, ಪ್ರತಿ ವರ್ಷವು ರಿಜಿಸ್ಟರಿನಲ್ಲಿನ ನಮೂದುಗಳನ್ನು ಪರಿಶೀಲಿಸತಕ್ಕದ್ದು ಮತ್ತು ಅನುಮೋದನೆಗಾಗಿ ರಿಜಿಸ್ಟರಿನಲ್ಲಿ ಮಾಡಬೇಕಾದ ಬದಲಾವಣೆಗಳನ್ನು, ಲೋಪಿಸುವವುಗಳನ್ನು ಅಥವಾ ಸೇರ್ಪಡೆಗಳನ್ನು ತೋರಿಸುವ ಸತ್ಯಾಪಿಸಲಾದ ವಿವರ ಪತ್ರವನ್ನು ನಿಯಮಿಸಲಾದ ಪ್ರಾಧಿಕಾರಿಗೆ ಸಲ್ಲಿಸತಕ್ಕದ್ದು.

(10) ನಿಯಮಿಸಲಾದ ಪ್ರಾಧಿಕಾರಿಯು, ರಿಜಿಸ್ಟರನ್ನು ಅಥವಾ ವಿವರ ಪತ್ರವನ್ನು ಸ್ವೀಕರಿಸಿದ ಮೇಲೆ ಅದನ್ನು ಸತ್ಯಾಪನೆ ಮಾಡತಕ್ಕದ್ದು ಅಥವಾ ಸ್ಥಳೀಯ ಅಧಿಕಾರಿಗಳ ಮೂಲಕ ಸತ್ಯಾಪನೆ ಮಾಡಿಸಬಹುದು ಮತ್ತು ಅದರಲ್ಲಿ ಮಾಡಿರುವ ನಮೂದುಗಳ ಬಗ್ಗೆ ಮನದಟ್ಟು ಮಾಡಿಕೊಂಡ ತರುವಾಯ ಅದಕ್ಕೆ ಅನುಮೋದನೆ ನೀಡಬಹುದು.

(11) ಅಧಿಸೂಚಿತ ಸಂಸ್ಥೆಗೆ ನೀಡಲಾಗಿದ್ದ ಅಥವಾ ಅದಕ್ಕೆ ಸೇರಿರುವ ಯಾವುದೇ ಭೂಮಿಯ ಅಥವಾ ಇತರ ಸ್ಥಿರ ಸ್ವತ್ತಿನ ಯಾವುದೇ ಮಾರಾಟ, ಗೇಣಿ, ದಾನ, ಅಡಮಾನದ ಮೂಲಕ ಅಥವಾ ಅನ್ಯಥಾ ಮಾಡಲಾದ ಯಾವುದೇ ಪರಭಾರೆ ಅಥವಾ ವರ್ಗಾವಣೆಯು ಮತ್ತು ಅಂಥ ಭೂಮಿಗೆ ಅಥವಾ ಸ್ವತ್ತಿಗೆ ಸಂಬಂಧಪಟ್ಟಂತೆ ಅಂಥ ಸಂಸ್ಥೆಗೆ ಪ್ರತಿಕೂಲ ಹಿತಾಸಕ್ತಿಯನ್ನು ಸೃಜಿಸುವುದೆಂದು ತಾತ್ಪರ್ಯವಾಗುವ ಯಾವುದೇ ಕಾರ್ಯವು, ಅಂಥ ಪರಭಾರೆ ಅಥವಾ ವರ್ಗಾವಣೆಯು ಸಂಸ್ಥೆಯ ಅತ್ಯುತ್ತಮ ಹಿತಾಸಕ್ತಿಯಿಂದ ಆಗಿರದ ಹೊರತು, ಮತ್ತು ಅದು 62ನೇ ಪ್ರಕರಣದ ಅಡಿಯಲ್ಲಿ ಮಂಜೂರಾಗಿರದ ಹೊರತು, ಅದು ಅಕೃತ ಮತ್ತು ಶೂನ್ಯವಾಗತಕ್ಕದ್ದು.

(12) ಯಾವುದೇ ಚಿನ್ನದ, ಬೆಳ್ಳಿಯ ಅಥವಾ ಬಿಳಿಯ ಲೋಹದ ಸಾಮಗ್ರಿಗಳು, ಮೂರ್ತಿಗಳು, ಪಾತ್ರೆಗಳು, ಅಮೂಲ್ಯ ಹರಳುಗಳು, ಪ್ರಾಚ್ಯ ಮಹತ್ವದ ಸಾಮಗ್ರಿಗಳು, ವರ್ಣಚಿತ್ರಗಳು, ಕಲ್ಲಿನ ಮೇಲೆ, ಲೋಹದ ಮೇಲೆ ಮತ್ತು ತಾಳೆ ಗರಿಗಳ ಮೇಲೆ ಶಾಸನವನ್ನು ಒಳಗೊಂಡಿರುವ ಪ್ರಾಚೀನ ದಸ್ತಾವೇಜುಗಳು ಮತ್ತು ಅಂಥ ಇತರ ಚರ ಸ್ವತ್ತುಗಳನ್ನು, ಆಯುಕ್ತರ ವರದಿಯನ್ನು ಆಧರಿಸಿ, ರಾಜ್ಯ ಸರ್ಕಾರದ ಅನುಮತಿಯನ್ನು ಪಡೆಯದೆ, ಯಾವುದೇ ರೀತಿಯಲ್ಲಿ ವಿಲೆ ಮಾಡತಕ್ಕದ್ದಲ್ಲ."

**24. 33ನೇ ಪ್ರಕರಣದ ಪ್ರತ್ಯಾಯೋಜನೆ.–** ಮೂಲ ಅಧಿನಿಯಮದ 33ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"33. ಅಧಿಸೂಚಿತ ಸಂಸ್ಥೆಗಳ ಪರವಾಗಿ ದಾವೆಗಳು.–** ಯಾವುದೇ ನ್ಯಾಯಾಲಯದಲ್ಲಿ ಅಥವಾ ಪ್ರಾಧಿಕಾರದಲ್ಲಿ ದಾವೆಯನ್ನು ಅಥವಾ ಅಪೀಲನ್ನು ಅಥವಾ ವ್ಯವಹರಣೆಗಳನ್ನು ಹೂಡುವುದು ಅವಶ್ಯವಾಗಿರುವಾಗ, ವ್ಯವಸ್ಥಾಪನಾ ಸಮಿತಿಯು ಅಥವಾ ವ್ಯವಸ್ಥಾಪನಾ ಸಮಿತಿಯಿಂದ ಯುಕ್ತವಾಗಿ ಪ್ರಾಧಿಕೃತನಾದ ಕಾರ್ಯ ನಿರ್ವಾಹಕ ಅಧಿಕಾರಿಯು, ನಿಯಮಿಸಲಾದ ಪ್ರಾಧಿಕಾರದ ಪೂರ್ವಾನುಮೋದನೆಯನ್ನು ಪಡೆದು ನ್ಯಾಯಾವಾದಿಯನ್ನು ನೇಮಿಸಿಕೊಳ್ಳುವ ಮೂಲಕ ದಾವೆಯನ್ನು ಹೂಡಬಹುದು:

ಪರಂತು, ವ್ಯವಸ್ಥಾಪನಾ ಸಮಿತಿಯು ದಾವೆಯನ್ನು ಅಥವಾ ಅಪೀಲನ್ನು ಹೂಡಲು ವಿಫಲವಾದರೆ, ಸಹಾಯಕ ಆಯುಕ್ತನು, ನಿಯಮಿಸಲಾದ ಪ್ರಾಧಿಕಾರದ ಅನುಮೋದನೆ ಪಡೆದು ಅದನ್ನು ಹೂಡತಕ್ಕದ್ದು."

**25. 35ನೇ ಪ್ರಕರಣದ ಪ್ರತ್ಯಾಯೋಜನೆ.–** ಮೂಲ ಅಧಿನಿಯಮದ 35ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"35. ಅಧಿನಿಯಮದ ಉಪಬಂಧಗಳ ಅನ್ವಯ.–** (1) 41ನೇ ಪ್ರಕರಣವನ್ನು ಮತ್ತು VIII ನೇ ಅಧ್ಯಾಯದ ಉಪಬಂಧಗಳನ್ನು ಹೊರತುಪಡಿಸಿ ಈ ಅಧಿನಿಯಮದಲ್ಲಿ ಒಳಗೊಂಡಿರುವುದು ಯಾವುದೂ, ಧಾರ್ಮಿಕ ವರ್ಗವು ಸ್ಥಾಪಿಸಿದ, ಸಂಘಟಿಸಿದ, ನಡೆಸುವ ಅಥವಾ ನಿರ್ವಹಿಸುವ ಯಾವುದೇ ಧಾರ್ಮಿಕ ಸಂಸ್ಥೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯವಾಗುವುದಿಲ್ಲ.

(2) VIIನೇ ಅಧ್ಯಾಯದಲ್ಲಿ ಒಳಗೊಂಡಿರುವುದು ಯಾವುದೂ, ಒಂದು ಲಕ್ಷ ರೂಪಾಯಿಗಳನ್ನು ಮೀರದ ಒಟ್ಟು ವಾರ್ಷಿಕ ಆದಾಯವನ್ನು ಹೊಂದಿರುವ ಅಧಿಸೂಚಿತ ಸಂಸ್ಥೆಗೆ ಅನ್ವಯವಾಗತಕ್ಕದ್ದಲ್ಲ."

**26. 36ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 36ನೇ ಪ್ರಕರಣದಲ್ಲಿ,–

(i) (1)ನೇ ಉಪ-ಪ್ರಕರಣದಲಿ, "ಸಂಸ್ಥೆಯ ಪ್ರಭಾರದಲ್ಲಿರುವ ಸಹಾಯಕ ಆಯುಕ್ತನಿಗೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ii) (2)ನೇ ಉಪ-ಪ್ರಕರಣದಲ್ಲಿನ (ಸಿ) ಖಂಡದಲ್ಲಿ, (vi)ನೇ ಉಪ-ಖಂಡದ ನಂತರ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ,–

"(vii) ಅಧಿಸೂಚಿತ ಸಂಸ್ಥೆಗಳು ಹೊಂದಿರುವ ಹಾಗೂ ನಿಯಂತ್ರಿಸುತ್ತಿರುವ ಶೈಕ್ಷಣಿಕ ಸಂಸ್ಥೆಗಳ ನಿರ್ವಹಣೆ.

(viii) ಅಧಿಸೂಚಿತ ಸಂಸ್ಥೆಗಳ ಪ್ರವರ್ಗಗಳನ್ನು ಗಣನೆಗೆ ತೆಗೆದುಕೊಳ್ಳದೆ, ಧಾರ್ಮಿಕ, ಧರ್ಮಾದಾಯ, ಶೈಕ್ಷಣಿಕ, ಧಾರ್ಮಿಕ ಪ್ರವಚನಗಳಿಗೆ ಹಾಗೂ ಆಯುಕ್ತರಿಂದ ಯುಕ್ತವಾಗಿ ಮಂಜೂರಾತಿಯನ್ನು ಪಡೆದು ಧರ್ಮ ಹಾಗೂ ಸಾಂಸ್ಕೃತಿಕ ಮೌಲ್ಯದ ಉಪನ್ಯಾಸದ ಉದ್ದೇಶವನ್ನು ಹೊಂದಿರುವ ಇತರೆ ಉದ್ದೇಶಗಳಿಗೆ ಹೆಚ್ಚುವರಿ ನಿಧಿಯ ಉಪಯೋಗದ ಉದ್ದೇಶದ ಬದಲಾವಣೆಯು ಹೆಚ್ಚುವರಿ ನಿಧಿಯ ಶೇಕಡ ಹತ್ತನ್ನು ಮೀರತಕ್ಕದ್ದಲ್ಲ."

(iii) (3)ನೇ ಉಪ-ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ,–

"(3) 17ನೇ ಪ್ರಕರಣದ ಅಡಿಯಲ್ಲಿ ಉಪಬಂಧಿಸಲಾದಂತೆ ಸಾಮಾನ್ಯ ಸಂಗ್ರಹಣಾ ನಿಧಿಗೆ ವಂತಿಗೆಯ ಸಂದಾಯಕ್ಕಾಗಿ."

(iv) (4)ನೇ ಉಪ-ಪ್ರಕರಣದ,–

(ಎ) (i)ನೇ ಖಂಡದಲ್ಲಿ "ಒಂದು ಲಕ್ಷ ರೂಪಾಯಿಗಳಿಗೆ" ಎಂಬ ಪದಗಳಿಗೆ "ಐದು ಲಕ್ಷ ರೂಪಾಯಿಗಳಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) (ii)ನೇ ಖಂಡದಲ್ಲಿ, "ಒಂದು ಲಕ್ಷ ರೂಪಾಯಿಗಳಿಗೆ ಮೀರಿದ್ದು ಆದರೆ ಹತ್ತು ಲಕ್ಷ ರೂಪಾಯಿಗಳಿಗೆ ಮೀರದ" ಪದಗಳಿಗೆ "ಐದು ಲಕ್ಷ ರೂಪಾಯಿಗಳಿಗೆ ಮೀರಿದ್ದು ಆದರೆ ಇಪ್ಪತ್ತೈದು ಲಕ್ಷ ರೂಪಾಯಿಗಳಿಗೆ ಮೀರದ" ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಸಿ) (iii)ನೇ ಖಂಡದಲ್ಲಿ, "ಹತ್ತು ಲಕ್ಷ ರೂಪಾಯಿಗಳಿಗೆ" ಎಂಬ ಪದಗಳಿಗೆ "ಇಪ್ಪತ್ತೈದು ಲಕ್ಷ ರೂಪಾಯಿಗಳಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**27. 37ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 37ನೇ ಪ್ರಕರಣದ (2)ನೇ ಉಪ-ಪ್ರಕರಣದ ಪರಂತುಕದ ನಂತರ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತು ಪರಂತು, ಅಧಿಸೂಚಿತ ಅಥವಾ ಘೋಷಿತ ಸಂಸ್ಥೆಗಳ ಲೆಕ್ಕಪತ್ರಗಳನ್ನು ರಾಜ್ಯ ಲೆಕ್ಕಪತ್ರಗಳ ಇಲಾಖೆಯು ಲೆಕ್ಕಪರಿಶೋಧಿಸಿದಲ್ಲಿ ಯಾವುದೇ ಲೆಕ್ಕ ಪರಿಶೋಧನಾ ಶುಲ್ಕವನ್ನು ವಿಧಿಸತಕ್ಕದ್ದಲ್ಲ ಮತ್ತು ಸಂಗ್ರಹಿಸತಕ್ಕದ್ದಲ್ಲ."

**28. 53ನೇ ಪ್ರಕರಣದ ಪ್ರತ್ಯಾಯೋಜನೆ.–** ಮೂಲ ಅಧಿನಿಯಮದ 53ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ.–

**"53. ದೇವಸ್ಥಾನಗಳ ನೋಂದಣಿ.–** (1) ಅಧಿನಿಯಮದ 23ನೇ ಪ್ರಕರಣದ ಅಡಿಯಲ್ಲಿ ಅಧಿಸೂಚಿಸಿದ ದೇವಸ್ಥಾನಗಳನ್ನು ಹೊರತುಪಡಿಸಿ ಯಾವುದೇ ದೇವಸ್ಥಾನದ ವ್ಯವಸ್ಥಾಪನೆಯ ಪ್ರಭಾರದಲ್ಲಿರುವ ನ್ಯಾಸಧಾರಿ, ವ್ಯವಸ್ಥಾಪಕ ಅಥವಾ ಯಾವುದೇ ಇತರ ವ್ಯಕ್ತಿಯು, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011ರ ಪ್ರಾರಂಭದ ದಿನಾಂಕದಿಂದ ತೊಂಬತ್ತು ದಿನಗಳೊಳಗೆ, ದೇವಸ್ಥಾನವು ಯಾರ ಅಧಿಕಾರ ವ್ಯಾಪ್ತಿಯೊಳಗೆ ಬರುತ್ತದೋ ಅಂಥ ಸಹಾಯಕ ಆಯುಕ್ತರಿಗೆ ದೇವಸ್ಥಾನದ ನೋಂದಣಿಗಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು:

ಪರಂತು, ಸಹಾಯಕ ಆಯುಕ್ತರು, ಸಾಕಷ್ಟು ಕಾರಣಗಳನ್ನು ದಾಖಲಿಸಿ, ಅರ್ಜಿಯನ್ನು ಸಲ್ಲಿಸಲು ಸಮಯವನ್ನು ವಿಸ್ತರಿಸಬಹುದು.

(2) (1)ನೇ ಉಪ-ಪ್ರಕರಣದಡಿಯಲ್ಲಿ ಸಲ್ಲಿಸಿದ ಪ್ರತಿಯೊಂದು ಅರ್ಜಿಯು ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ದೇವಸ್ಥಾನದ ಇತಿಹಾಸ ಮತ್ತು ಮೂಲ, ಇದರ ಸ್ವರೂಪ ಹಾಗೂ ಲಕ್ಷಣಗಳು ಯಾವುದಾದರೂ ಇದ್ದಲ್ಲಿ.

(ii) ಸ್ಥಾಪಕನ ಹೆಸರು, ಹಿಂದಿನ ಹಾಗೂ ಈಗಿನ ನ್ಯಾಸಧಾರಿಗಳ ಹೆಸರು.

(iii) ಸಂಸ್ಥೆಗಳು ಅಥವಾ ದತ್ತಿಗಳ ವಿವರಗಳು ಹಾಗೂ ಆಡಳಿತದ ಯೋಜನೆ, ಸಂಸ್ಥೆಯ ಸ್ಥಾಪನೆಗೆ ಸಂಬಂಧಿಸಿದ ಹಕ್ಕುಗಳ ಡಿಕ್ರಿ ಅಥವಾ ಯಾವುದೇ ಇತರ ದಾಖಲೆ.

(iv) ಅಂದಾಜು ಮೌಲ್ಯದೊಂದಿಗೆ ದೇವಸ್ಥಾನಕ್ಕೆ ಸಂಬಂಧಿಸಿದ ಆಭರಣಗಳು, ಚಿನ್ನ, ಬೆಳ್ಳಿ, ಅಮೂಲ್ಯ ಹರಳು, ಪಾತ್ರೆಗಳು, ಪಾತ್ರೆಗಳನ್ನು ಒಳಗೊಂಡಂತೆ ಚರ ಮತ್ತು ಸ್ಥಿರ ಆಸ್ತಿಗಳು ಮತ್ತು ಭದ್ರತೆಗಳು, ನಿಧಿಗಳು ಹಾಗೂ ಇವುಗಳಿಂದ ಪಡೆದ ವಾರ್ಷಿಕ ಆದಾಯದ ವಿವರಗಳು.

(3) ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಸಹಾಯಕ ಆಯುಕ್ತನು, ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ, ಮತ್ತು ಆಸಕ್ತಿಯನ್ನು ಹೊಂದಿರುವ ವ್ಯಕ್ತಿಯನ್ನು ಸುನಾವಣೆ ಮಾಡಿದ ಮೇಲೆ, ಅದರ ನೋಂದಣಿಗೆ ಸಂಬಂಧಿಸಿದ ಆದೇಶವನ್ನು ಹೊರಡಿಸತಕ್ಕದ್ದು ಹಾಗೂ ತಾನು ಮಾಡಿದ ವಿಚಾರಣೆಯ ಪರಿಣಾಮವಾಗಿ ತಾನು ಮಾಡಿದ ಯಾವುದೇ ಮಾರ್ಪಾಡುಗಳೊಂದಿಗೆ, ಅರ್ಜಿಯಲ್ಲಿ ಒದಗಿಸಿದ ವಿವರಗಳನ್ನು ಒಳಗೊಂಡಂತೆ ಒಂದು ಪ್ರಮಾಣ ಪತ್ರವನ್ನು ಮಂಜೂರು ಮಾಡತಕ್ಕದ್ದು.

(4) (3)ನೇ ಉಪ-ಪ್ರಕರಣದ ಅಡಿಯಲ್ಲಿ ಮಂಜೂರು ಮಾಡಿದ ನೋಂದಣಿ ಪ್ರಮಾಣ ಪತ್ರದಲ್ಲಿ ಒಳಗೊಂಡ ಪ್ರತಿಯೊಂದು ದೇವಸ್ಥಾನಕ್ಕೆ ಸಂಬಂಧಿಸಿದ ವಿವರಗಳನ್ನು ನೋಂದಣಿ ಮಾಡಿದ ಎಲ್ಲಾ ಸಂಸ್ಥೆಗಳ ಸಂಬಂಧದಲ್ಲಿ ಸಹಾಯಕ ಆಯುಕ್ತರು ನಿರ್ವಹಿಸುವ ದೇವಸ್ಥಾನಗಳ ರಿಜಿಸ್ಟರಿನಲ್ಲಿ ನಮೂದಿಸತಕ್ಕದ್ದು ಹಾಗೂ ಪ್ರತಿ ಸಂಸ್ಥೆಗೆ ಸಂಬಂಧಿಸಿದಂತೆ ರಿಜಿಸ್ಟರಿನಲ್ಲಿ ಮಾಡಿದ ನಮೂದುಗಳ ಒಂದು ಪ್ರತಿಯನ್ನು ಉಪ ಆಯುಕ್ತರಿಗೆ ಹಾಗೂ ಆಯುಕ್ತರಿಗೆ ಒದಗಿಸತಕ್ಕದ್ದು.

(5) ಸಂಸ್ಥೆಯ ಅಥವಾ ದತ್ತಿಯ ಪ್ರಭಾರದಲ್ಲಿರುವ ಯಾವೊಬ್ಬ ನ್ಯಾಸಧಾರಿ ಅಥವಾ ಇತರೆ ವ್ಯಕ್ತಿಯು ಸಂಸ್ಥೆಯ ನೋಂದಣಿಗೆ ಅರ್ಜಿಯನ್ನು ಸಲ್ಲಿಸಲು ವಿಫಲನಾದಲ್ಲಿ, ಸಹಾಯಕ ಆಯುಕ್ತನು, ನಿರ್ದಿಷ್ಟಪಡಿಸಿದ ಅವಧಿಯೊಳಗೆ ಅರ್ಜಿಯನ್ನು ಸಲ್ಲಿಸುವುದಕ್ಕೆ ಅಂಥ ನ್ಯಾಸಧಾರಿ ಅಥವಾ ಆಸಕ್ತಿಯಿರುವ ಇತರೆ ವ್ಯಕ್ತಿಗೆ ನೋಟೀಸನ್ನು ನೀಡತಕ್ಕದ್ದು ಹಾಗೂ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಅಂಥ ಅರ್ಜಿಯನ್ನು ಸಲ್ಲಿಸಲು ಅವನು ವಿಫಲನಾದಲ್ಲಿ, ಸಹಾಯಕ ಆಯುಕ್ತನು, ನಿಯಮಿಸಬಹುದಾದಂಥ ಪ್ರಕ್ರಿಯೆಯನ್ನು ಅನುಸರಿಸಿದ ನಂತರ ಸಂಸ್ಥೆಯನ್ನು ನೋಂದಾಯಿಸಬಹುದು ಹಾಗೂ ಅಂಥ ನೋಂದಣಿಗಾಗಿ ಮಾಡಿದ ಖರ್ಚನ್ನು ಸಂಸ್ಥೆಯ ನಿಧಿಗಳಿಂದ ವಸೂಲಿ ಮಾಡತಕ್ಕದ್ದು."

**29. 63ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 63ನೇ ಪ್ರಕರಣದಲ್ಲಿ, (1)ನೇ ಉಪ-ಪ್ರಕರಣದಲ್ಲಿ "ಸಹಾಯಕ ಆಯುಕ್ತ ಅಥವಾ ಉಪ ಆಯುಕ್ತ" ಎಂಬ ಪದಗಳ ತರುವಾಯ ಪ್ರತ್ಯಯಗಳೊಂದಿಗೆ, ಅವುಗಳು ಬರುವ ಕಡೆಗಳಲ್ಲೆಲ್ಲ "ವ್ಯವಸ್ಥಾಪನಾ ಸಮಿತಿ ಅಥವಾ ಕಾರ್ಯನಿರ್ವಹಣಾಧಿಕಾರಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**30. 63ಎ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 63ನೇ ಪ್ರಕರಣದ ನಂತರ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"63ಎ. ರಾಜ್ಯ ಧಾರ್ಮಿಕ ಪರಿಷತ್ತಿಗೆ ಅಪೀಲು ಹಾಗೂ ಅದರ ಆದೇಶದ ವಿರುದ್ಧದ ಅಪೀಲು.–** (1) ರಾಜ್ಯ ಧಾರ್ಮಿಕ ಪರಿಷತ್ತು ತನ್ನ ಮೂಲ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿ ಹೊರಡಿಸಿದ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು ಮುಖ್ಯ ಕಾನೂನು ಪ್ರಶ್ನೆಯ ಮೇಲೆ ಉಚ್ಚನ್ಯಾಯಾಲಯಕ್ಕೆ ಅಪೀಲನ್ನು ಸಲ್ಲಿಸಬಹುದು.

(2) ಈ ಅಧಿನಿಯಮದ ಯಾವುದೇ ಉಪಬಂಧಗಳ ಅಡಿಯಲ್ಲಿ ಜಿಲ್ಲಾ ಧಾರ್ಮಿಕ ಪರಿಷತ್ತು ಹೊರಡಿಸಿದ ಆದೇಶಗಳಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು ಆದೇಶದ ದಿನಾಂಕದಿಂದ ಮೂವತ್ತು ದಿನಗಳ ಒಳಗೆ ರಾಜ್ಯ ಧಾರ್ಮಿಕ ಪರಿಷತ್ತಿಗೆ ಅಪೀಲನ್ನು ಸಲ್ಲಿಸಬಹುದು. ರಾಜ್ಯ ಧಾರ್ಮಿಕ ಪರಿಷತ್ತು ಸಂಬಂಧಪಟ್ಟ ಎಲ್ಲಾ ಪಕ್ಷಕಾರರಿಗೆ ನೋಟೀಸನ್ನು ನೀಡಿದ ನಂತರ ಹಾಗೂ ಉಭಯ ಪಕ್ಷಕಾರರನ್ನು ಸುನಾವಣೆ ಮಾಡಿದ ಮೇಲೆ ಕಾನೂನಿಗನುಸಾರವಾಗಿ ಆದೇಶಗಳನ್ನು ಹೊರಡಿಸತಕ್ಕದ್ದು.

**63ಬಿ. ಸರ್ಕಾರದಿಂದ ಪುನರವಲೋಕನ.–** ರಾಜ್ಯ ಸರ್ಕಾರವು, ಯಾವುದೇ ಆದೇಶದ ಅಥವಾ ವ್ಯವಹರಣೆಯ ಸರಿತನ, ಕಾನೂನು ಸಮ್ಮತತೆ ಅಥವಾ ಔಚಿತ್ಯದ ಬಗ್ಗೆ ಸ್ವತಃ ಮನದಟ್ಟು ಮಾಡಿಕೊಳ್ಳುವ ಉದ್ದೇಶಕ್ಕಾಗಿ ಯಾವುದೇ ವ್ಯವಹರಣೆಗಳ ಅಥವಾ ಆಯುಕ್ತನು ಅಥವಾ ಉಪ ಆಯುಕ್ತನು ಹೊರಡಿಸಿದ ಆದೇಶಗಳ ದಾಖಲೆಗಳನ್ನು ತರಿಸಿಕೊಳ್ಳಬಹುದು ಮತ್ತು ಅದನ್ನು ಪರಿಶೀಲಿಸಬಹುದು ಮತ್ತು ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ತರುವಾಯ, ಅದರ ಸಂಬಂಧದಲ್ಲಿ ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಮಾಡಬಹುದು."

**31. 66ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 66ನೇ ಪ್ರಕರಣದಲ್ಲಿ, "ಈ ಅಧಿನಿಯಮದ ಅಡಿಯಲಿ ವಿಚಾರಣೆಗಳನ್ನು ನಡೆಸುವಾಗ" ಎಂಬ ಪದಗಳ ತರುವಾಯ, "ರಾಜ್ಯ ಧಾರ್ಮಿಕ ಪರಿಷತ್ತು, ಜಿಲ್ಲಾ ಧಾರ್ಮಿಕ ಪರಿಷತ್ತು ಮತ್ತು" ಎಂಬ ಪದಗಳನ್ನು ಸೇರಿಸತಕ್ಕದ್ದು.

**32. 69ಎ, 69ಬಿ, 69ಸಿ ಮತ್ತು 69ಡಿ ಹೊಸ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 69ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"69ಎ. ಹುಂಡಿಯಲ್ಲಿ ಅಥವಾ ದೇವಸ್ಥಾನದ ಇತರ ಆದಾಯದಲ್ಲಿ ಪಾಲನ್ನು ನೀಡುವುದರ ರದ್ದತಿ.–** ಯಾವುದೇ ನ್ಯಾಯಾಲಯದ, ನ್ಯಾಯಾಧಿಕರಣದ ಅಥವಾ ಯಾವುದೇ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶದಲ್ಲಿ ಅಥವಾ ಯಾವುದೇ ಯೋಜನೆ, ರೂಢಿ, ಆಚರಣೆ ಅಥವಾ ಒಪ್ಪಂದದಲ್ಲಿ ಅಥವಾ ಯಾವುದೇ ಸಂಸ್ಥೆಯು ಸಿದ್ಧಪಡಿಸಿದ ಯಾವುದೇ ಕೈಪಿಡಿಯಲ್ಲಿ, ಅಥವಾ ಸರ್ಕಾರದ ಯಾವುದೇ ಪತ್ರ, ಸನ್ನದು, ಆದೇಶದಲ್ಲಿ, ಯಾವುದೇ ಧಾರ್ಮಿಕ ಅಥವಾ ಧರ್ಮಾದಾಯ ಸಂಸ್ಥೆಯನ್ನು ಅಥವಾ ದತ್ತಿಯನ್ನು ನಿಯಂತ್ರಿಸುವುದಕ್ಕೆ ವಿರುದ್ಧವಾದುದು ಏನೇ ಒಳಗೊಂಡಿದ್ದರೂ, ಹುಂಡಿಯಲ್ಲಿ ಅಥವಾ ಕಾಣಿಕೆಯಲ್ಲಿ ಅಥವಾ ಸಂಸ್ಥೆಯ ಇತರ ಆದಾಯದಲ್ಲಿ ಅರ್ಚಕ ಅಥವಾ ಮಿರಾಸಿದರ್ ಅಥವಾ ಮುಜಾವರನೂ ಸೇರಿದಂತೆ ಯಾವೊಬ್ಬ ನ್ಯಾಸಧಾರಿಗೆ, ಧರ್ಮದರ್ಶಿಗೆ, ಧರ್ಮಕರ್ತನಿಗೆ, ಮುತವಲ್ಲಿಗೆ ಅಥವಾ ಯಾವೊಬ್ಬ ಪದಧಾರಕನಿಗೆ ಅಥವಾ ನೌಕರನಿಗೆ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆ ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011ರ ಪ್ರಾರಂಭದಂದು ಸಂದಾಯ ಮಾಡಬೇಕಾಗಿದ್ದ ಅಥವಾ ಸಂದಾಯ ಮಾಡಿರುವ ಅಥವಾ ನೀಡಿದ ಅಥವಾ ಅನುಮತಿಸಿದ ಯಾವುದೇ ಪಾಲಿನಲ್ಲಿ ಸೇವಾರುಸುಮನ್ನು ಅಥವಾ ತಟ್ಟೆಕಾಸನ್ನು ಹೊರತುಪಡಿಸಿ ಪಾಲು ಇರತಕ್ಕದ್ದಲ್ಲ.

**69ಬಿ. ಅಧಿಸೂಚಿತ ಸಂಸ್ಥೆಗಳ ಅಥವಾ ಘೋಷಿತ ಸಂಸ್ಥೆಗಳ ಪರವಾಗಿ ನಿಧಿ ಸಂಗ್ರಹಿಸುವುದರ ಪ್ರತಿಷೇಧ.–** (1) ಯಾವೊಬ್ಬ ವ್ಯಕ್ತಿಯು, ಯಾವುದೇ ಸಂಸ್ಥೆಯು, ಸೇವಾ ಸಮಿತಿ ಅಥವಾ ಅಭಿವೃದ್ಧಿ ಸಂಸ್ಥೆಯು ನೋಂದಾಯಿತವಾಗಿರಲಿ ಅಥವಾ ನೋಂದಾಯಿತವಾಗಿಲ್ಲದಿರಲಿ, ನಿಯಮಿಸಲಾದ ಪ್ರಾಧಿಕಾರದಿಂದ ಅದು ಮಂಜೂರಾತಿ ಪಡೆದ ಹೊರತು, ಅಧಿಸೂಚಿತ ಸಂಸ್ಥೆಯ ಅಥವಾ ಘೋಷಿತ ಸಂಸ್ಥೆಯ ಹೆಸರಿನಲ್ಲಿ, ಯಾವುದೇ ಉದ್ದೇಶಕ್ಕಾಗಿ ಸೇವಾ ನಿಧಿಯನ್ನು ಅಥವಾ ದೇಣಿಗೆಯನ್ನು ಸಂಗ್ರಹಿಸಲು ಹಕ್ಕನ್ನು ಹೊಂದಿರತಕ್ಕದ್ದಲ್ಲ.

(2) ನಿಯಮಿಸಲಾದ ಪ್ರಾಧಿಕಾರವು, ಯಾವುದೇ ಅಧಿಸೂಚಿತ ಅಥವಾ ಘೋಷಿತ ಸಂಸ್ಥೆಯ, ಹೆಸರಿನಲ್ಲಿ ಅನಧಿಕೃತ ನಿಧಿ ಸಂಗ್ರಹಣೆಯ ಬಗ್ಗೆ ಯಾವೊಬ್ಬ ಭಕ್ತನಿಂದ ಅಥವಾ ಸಾರ್ವಜನಿಕರಿಂದ ಸ್ವೀಕರಿಸಿದ ದೂರಿನ ಮೇಲೆ, 50ನೇ ಪ್ರಕರಣದ ಅಡಿಯಲ್ಲಿ ವಿಚಾರಣೆಯನ್ನು ನಡೆಸಲು ಮತ್ತು ಮುಟ್ಟುಗೋಲು ಆದೇಶವೂ ಸೇರಿದಂತೆ, ಆದೇಶವನ್ನು ಹೊರಡಿಸಲು ಮತ್ತು ಸಂಬಂಧಪಟ್ಟ ಸಂಸ್ಥೆಯ ಲೆಕ್ಕಕ್ಕೆ ಅಂಥ ನಿಧಿಯನ್ನು ಜಮೆ ಮಾಡಲು ಸಕ್ಷಮವಾಗಿರತಕ್ಕದ್ದು.

**69ಸಿ. ವೆಚ್ಚದ ಮಾನಕ ಪ್ರಮಾಣಗಳನ್ನು ನಿಗದಿಪಡಿಸುವುದು.–** (1) ಅಧಿಸೂಚಿತ ಸಂಸ್ಥೆಯ ವ್ಯವಸ್ಥಾಪನಾ ಸಮಿತಿಯು, ಕಾಲಕಾಲಕ್ಕೆ, ದಿತ್ತಂ ಅನ್ನು ಅಥವಾ ಸಂಸ್ಥೆಯಲ್ಲಿನ ವೆಚ್ಚದ ಪ್ರಮಾಣವನ್ನು ಮತ್ತು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011ರ ಪ್ರಾರಂಭದ ದಿನಾಂಕದಿಂದ ಆರು ತಿಂಗಳೊಳಗಾಗಿ ನಿಯಮಿಸಬಹುದಾದಂತೆ ಸಂಸ್ಥೆಯಲ್ಲಿ ಪ್ರಚಲಿತವಿರುವ ರೂಢಿ, ಪದ್ಧತಿ, ಆಚರಣೆ ಮತ್ತು ಧಾರ್ಮಿಕ ವಿಧಿಗಳ ವಿವರಗಳೊಂದಿಗೆ, ಅಂಥ ಸಂಸ್ಥೆಗೆ ಸಂಬಂಧಪಟ್ಟ ವಿವಿಧ ವಿನಿಯೋಗಗಳಿಗೆ ಹಂಚಿಕೆ ಮಾಡಲಿರುವ ಮೊತ್ತವನ್ನು ನಿಗದಿಪಡಿಸಿ ನಿಯಮಿಸಲಾದ ಪ್ರಾಧಿಕಾರಕ್ಕೆ ಪ್ರಸ್ತಾವವನ್ನು ಸಲ್ಲಿಸತಕ್ಕದ್ದು.

(2) ನಿಯಮಿಸಲಾದ ಪ್ರಾಧಿಕಾರವು, ಅಂಥ ಪ್ರಸ್ತಾವನೆಯನ್ನು ಸ್ವೀಕರಿಸಿದ ಮೇಲೆ, ಆ ಪ್ರಸ್ತಾವದ ಸರಿತನವನ್ನು ಸ್ವತಃ ಮನದಟ್ಟು ಮಾಡಿಕೊಂಡ ತರುವಾಯ, ಅದಕ್ಕೆ ಅನುಮೋದನೆ ನೀಡಬಹುದು ಅಥವಾ ಅದು ಹೆಚ್ಚಿನ ಮಾಹಿತಿಯನ್ನು, ಯಾವುದಾದರೂ ಬೇಕಾಗಿದ್ದರೆ, ಅದನ್ನು ಕೋರಿ ಆ ಪ್ರಸ್ತಾವವನ್ನು ಅಂಥ ಅಭಿಪ್ರಾಯದೊಂದಿಗೆ ವ್ಯವಸ್ಥಾಪನಾ ಸಮಿತಿಗೆ ಹಿಂದಿರುಗಿಸಬಹುದು ಮತ್ತು ಸಮಿತಿಯು ನಿಯಮಿಸಲಾದ ಪ್ರಾಧಿಕಾರಕ್ಕೆ ತೃಪ್ತಿಕರವಾಗುವಂತೆ ಕೋರಲಾದ ಮಾಹಿತಿಯನ್ನು ಒದಗಿಸತಕ್ಕದ್ದು, ನಿಯಮಿಸಲಾದ ಪ್ರಾಧಿಕಾರವು ಆ ಸಂಸ್ಥೆಯ ಆದಾಯವನ್ನು ಅವಲಂಬಿಸಿ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ನಿರ್ಬಂಧಗಳನ್ನು ವಿಧಿಸಿ ಅನುಮೋದನೆಯನ್ನು ನೀಡುವುದು.

**69ಡಿ. ವಾಸ್ತುಶಿಲ್ಪ ಸಮಿತಿಯ ರಚನೆ.–** (1) ರಾಜ್ಯ ಸರ್ಕಾರವು, ರಾಜ್ಯಕ್ಕಾಗಿ, ಈ ಮುಂದಿನ ಸದಸ್ಯರನ್ನು ಒಳಗೊಂಡಿರುವ ವಾಸ್ತುಶಿಲ್ಪ ಸಮಿತಿ ಎಂದು ಕರೆಯಲಾಗುವ ಒಂದು ಸಮಿತಿಯನ್ನು ರಚಿಸತಕ್ಕದ್ದು, ಎಂದರೆ:–

(i) ಸರ್ಕಾರವು ನೇಮಕ ಮಾಡಿದ ಇಲಾಖೆಯ ಸೂಪರಿಂಟೆಂಡಿಂಗ್ ಇಂಜಿನಿಯರ್ ವಾಸ್ತುಶಿಲ್ಪ ಸಮಿತಿಯ ಪದನಿಮಿತ್ತ ಅಧ್ಯಕ್ಷನಾಗಿರತಕ್ಕದ್ದು.

(ii) ಶಿಲ್ಪಕಲಾ ಪರಿಷತ್ತಿನ ಅಧ್ಯಕ್ಷರು – ಸದಸ್ಯರು

(iii) ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ಒಬ್ಬ ಸ್ಥಪತಿ – ಸದಸ್ಯರು

(iv) ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ಒಬ್ಬ ಆಗಮ ತಜ್ಞ – ಸದಸ್ಯರು

(v) ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ಒಬ್ಬ ವಾಸ್ತು ತಜ್ಞ – ಸದಸ್ಯರು

(2) ಅಧ್ಯಕ್ಷರನ್ನು ಹೊರತುಪಡಿಸಿ ವಾಸ್ತುಶಿಲ್ಪ ಸಮಿತಿಯ ಸದಸ್ಯರ ಪದಾವಧಿಯು ಮೂರು ವರ್ಷಗಳಾಗಿರತಕ್ಕದ್ದು.

(3) ವಾಸ್ತುಶಿಲ್ಪ ಸಮಿತಿಯ ಸದಸ್ಯರ ವಯಸ್ಸು, ಅರ್ಹತೆ ಹಾಗೂ ಅದರ ಅಧಿಕಾರಗಳು ಮತ್ತು ಪ್ರಕಾರ್ಯಗಳು ನಿಯಮಿಸಬಹುದಾದಂಥವುಗಳು ಆಗಿರತಕ್ಕದ್ದು."

**33. 71ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 71ನೇ ಪ್ರಕರಣದಲ್ಲಿ "ಆಯುಕ್ತ, ಉಪ ಆಯುಕ್ತ ಅಥವಾ" ಎಂಬ ಪದಗಳಿಗೆ "ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಜಿಲ್ಲಾ ಧಾರ್ಮಿಕ ಪರಿಷತ್ತು ಅಥವಾ ಆಯುಕ್ತ ಅಥವಾ ಉಪ ಆಯುಕ್ತ ಅಥವಾ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**34. 72ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 72ನೇ ಪ್ರಕರಣದಲ್ಲಿ, "ಉಚ್ಚ ನ್ಯಾಯಾಲಯವೂ ಸೇರಿದಂತೆ" ಎಂಬ ಪದಗಳಿಗೆ ಮೊದಲು "ನಿರ್ದಿಷ್ಟಪಡಿಸದಿರುವಲ್ಲಿ" ಎಂಬ ಪದಗಳನ್ನು ಸೇರಿಸತಕ್ಕದ್ದು.

**35. 73ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 73ನೇ ಪ್ರಕರಣದಲ್ಲಿ "ಆಯುಕ್ತ ಅಥವಾ ಉಪ ಆಯುಕ್ತ" ಎಂಬ ಪದಗಳಿಗೆ "ರಾಜ್ಯ ಧಾರ್ಮಿಕ ಪರಿಷತ್ತಿನ ಅಥವಾ ಜಿಲ್ಲಾ ಧಾರ್ಮಿಕ ಪರಿಷತ್ತಿನ" ಎಂಬ ಪದಗಳನ್ನು ಸೇರಿಸತಕ್ಕದ್ದು.

**36. 76ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 76ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ, (ಟಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಟಿ) ಅಭಿವೃದ್ಧಿ ಸಮಿತಿಯನ್ನು ರಚಿಸುವುದೂ ಸೇರಿದಂತೆ, ಅಧಿಸೂಚಿತ ಸಂಸ್ಥೆಗಳ ಸ್ವತ್ತಿನ ವ್ಯವಸ್ಥಾಪನೆ ಮತ್ತು ರಕ್ಷಣೆ, ಅಭಿವೃದ್ಧಿ;

(ಯು) ದೇವಸ್ಥಾನ ಯಕ್ಷಗಾನ ಮೇಳಗಳನ್ನು ನಡೆಸುವ ಹಕ್ಕನ್ನು ಮತ್ತು ಜಾತ್ರೆ ಮುಂತಾದ ಸಂದರ್ಭಗಳಲ್ಲಿ ಮುಡಿ, ಗೊಬ್ಬರ, ಅಂಗಡಿಗಳು ಮುಂತಾದುವುಗಳನ್ನು ನಿರ್ವಹಿಸುವ ವಿವಿಧ ಹಕ್ಕುಗಳನ್ನು ಹರಾಜು ಮಾಡುವುದನ್ನು ನಿಯಂತ್ರಿಸುವುದು;

(ವಿ) ದೇವಸ್ಥಾನಗಳ ನಿರ್ಮಾಣ, ನವೀಕರಣ, ದುರಸ್ತಿ ಮತ್ತು ಪುನರ್ ನಿರ್ಮಾಣಕ್ಕಾಗಿ ಅನುಮೋದನೆ ನೀಡಲು ರಾಜ್ಯ ಮಟ್ಟದ ವಾಸ್ತು ಶಿಲ್ಪ ಸಮಿತಿಯ ರಚನೆ;

(ಡಬ್ಲ್ಯೂ) ವ್ಯವಸ್ಥಾಪನಾ ಸಮಿತಿಯ ಮತ್ತು ಕಾರ್ಯನಿರ್ವಾಹಕ ಅಧಿಕಾರಿಗಳ ಅಧಿಕಾರಗಳು ಮತ್ತು ಪ್ರಕಾರ್ಯಗಳು

(ಎಕ್ಸ್) ಈ ಅಧಿನಿಯಮದ ಅಡಿಯಲ್ಲಿ ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದ ಯಾವುದೇ ಇತರ ವಿಷಯ."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ನ್ನು ರಿಟ್ ಅರ್ಜಿ ಸಂಖ್ಯೆ: 3440/2005ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ತಳ್ಳಿ ಹಾಕಿತು. ಸಿವಿಲ್ ಅಪೀಲು ಸಂಖ್ಯೆ: 5924/2008ರಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯವು, ಉಚ್ಚ ನ್ಯಾಯಾಲಯದ ತೀರ್ಪಿನ ಕಾರ್ಯಾಚರಣೆಗೆ ತಡೆ ನೀಡಿತು ಮತ್ತು ಅಧಿನಿಯಮದ 25ನೇ ಪ್ರಕರಣದ ಉಪಬಂಧಗಳನ್ನು ಹೊರತುಪಡಿಸಿ ಅಧಿನಿಯಮವನ್ನು ಜಾರಿಗೊಳಿಸುವುದಕ್ಕೆ ಅನುಮತಿ ನೀಡಿತು.

ಸರ್ಕಾರವು, ತೀರ್ಪಿನ ತೊಡಕುಗಳನ್ನು ಮತ್ತು ವಿವಾದಾಂಶಗಳನ್ನು ವಿವರವಾಗಿ ಪರಿಶೀಲಿಸುವುದಕ್ಕಾಗಿ ಒಂದು ಉನ್ನತ ಮಟ್ಟದ ಸಮಿತಿಯನ್ನು ರಚಿಸಿತು. ಉನ್ನತ ಮಟ್ಟದ ಸಮಿತಿಯು ತನ್ನ ವರದಿಯನ್ನು ಸಲ್ಲಿಸಿತು. ಉನ್ನತ ಮಟ್ಟದ ಸಮಿತಿಯ ವರದಿಯನ್ನು ಮತ್ತು ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಪರಿಗಣಿಸಿ, ಈ ಮುಂದಿನವುಗಳಿಗಾಗಿ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ:-

(1) ಮಠಾಧಿಪತಿಗಳು ಮಠಗಳ ಮುಖ್ಯಸ್ಥರಾಗಿರುವುದರಿಂದ ಮತ್ತು ಅವು ಅವರ ನಿರ್ವಹಣೆಯಲ್ಲಿರುವುದರಿಂದ, ಮಠಗಳು ಮತ್ತು ಮಠಗಳಿಗೆ ಸೇರಿದ ದೇವಸ್ಥಾನಗಳನ್ನು ಈ ಅಧಿನಿಯಮದ ವ್ಯಾಪ್ತಿಯಿಂದ ಹೊರಗಿಡಲಾಗಿದೆ.

(2) ಧಾರ್ಮಿಕ ಸಂಸ್ಥೆಗಳ ಉತ್ತಮ ಆಡಳಿತ ನಿರ್ವಹಣೆಗಾಗಿ ದೇವಸ್ಥಾನಗಳನ್ನು ಆಡಳಿತವನ್ನು ನೋಡಿಕೊಳ್ಳಲು ಮತ್ತು ವಿವಾದಗಳನ್ನು ಇತ್ಯರ್ಥ ಪಡಿಸುವುದಕ್ಕಾಗಿನ ಅಧಿಕಾರಗಳನ್ನು ಹೊಂದಿರುವ ರಾಜ್ಯ ಮಟ್ಟದಲ್ಲಿ ರಾಜ್ಯ ಧಾರ್ಮಿಕ ಪರಷತ್ತು ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸುವುದು.

(3) ನ್ಯಾಸಧಾರಿಗಳ ವಂಶ ಪಾರಂಪರ್ಯ ಹಕ್ಕುಗಳನ್ನು ಸಂರಕ್ಷಿಸುವುದು ಮತ್ತು ವಂಶಪಾರಂಪರ್ಯ ನ್ಯಾಸಧಾರಿಗಳು ಅಂಥ ದೇವಸ್ಥಾನಗಳ ಆಡಳಿತ ನಿರ್ವಹಣೆಯನ್ನು ಮುಂದುವರೆಸುವುದು.

(4) ಅರ್ಚಕರ ಮತ್ತು ದೇವಸ್ಥಾನ ನೌಕರರ ವಂಶಪಾರಂಪರ್ಯ ಹಕ್ಕುಗಳನ್ನು ಸಂರಕ್ಷಿಸುವುದು ಮತ್ತು ಅವರ ಕಾನೂನು ಸಮ್ಮತ ವಾರಸುದಾರರು ಸೇವೆಯಲ್ಲಿ ಮುಂದುವರೆಯಲು ಅವಕಾಶ ನೀಡುವುದು.

(5) ಖಾಸಗಿ ದೇವಸ್ಥಾನಗಳ ನೋಂದಣಿಗಾಗಿ ಉಪಬಂಧ ಕಲ್ಪಿಸುವುದು.

(6) ದೇವಸ್ಥಾನದ ಹುಂಡಿ ಹಣದಲ್ಲಿ ಮತ್ತು ದೇವಸ್ಥಾನದ ನೌಕರರ ಇತರ ಆದಾಯದಲ್ಲಿ ಪಾಲು ಪಡೆಯುವುದನ್ನು ನಿಷೇಧಿಸುವುದು.

(7) ಖಾಸಗಿ ವ್ಯಕ್ತಿಗಳು ಮತ್ತು ಸಂಘ ಸಂಸ್ಥೆಗಳು ದೇವಸ್ಥಾನದ ಹೆಸರಿನಲ್ಲಿ ಸಾರ್ವಜನಿಕರಿಂದ ನಿಧಿ ಸಂಗ್ರಹಿಸುವುದನ್ನು ನಿಷೇಧಿಸುವುದು.

(8) ದೇವಸ್ಥಾನದ ಅಭಿವೃದ್ಧಿ ಕಾಮಗಾರಿಗಳಿಗೆ ರಾಜ್ಯ ಮಟ್ಟದ ವಾಸ್ತು ಶಿಲ್ಪ ಸಮಿತಿಯನ್ನು ರಚಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು.

(9) ಒತ್ತುವರಿಯನ್ನು ತಪ್ಪಿಸುವುದಕ್ಕಾಗಿ ದೇವಸ್ಥಾನದ ಭೂಮಿಯನ್ನು ಮತ್ತು ನಿವೇಶನ ಸ್ವತ್ತನ್ನು ಮೋಜಣಿ ಮಾಡುವುದಕ್ಕಾಗಿ ಇಲಾಖೆಯಲ್ಲಿ ಒಂದು ಮೋಜಣಿ ವಿಭಾಗವನ್ನು ಸ್ಥಾಪಿಸುವುದು.

(10) ದೇವಸ್ಥಾನದ ಆಡಳಿತ ನಿರ್ವಹಣೆಗಾಗಿ ಅವಶ್ಯವಾದ ಕೆಲವು ವಿನಿಯಮಗಳನ್ನು ರಚಿಸುವುದಕ್ಕಾಗಿ ಉಪಬಂಧಗಳನ್ನು ಕಲ್ಪಿಸುವುದು.

ಆದ್ದರಿಂದ ಈ ವಿಧೇಯಕ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತ ಜ್ಞಾಪನ

**ಖಂಡ 9:** 9ನೇ ಖಂಡದ (**ii**)ನೇ ಉಪ-ಖಂಡವು ಪ್ರತಿಯೋಜಿಸಲು ಉದ್ದೇಶಿಸಲಾದ 12ನೇ ಪ್ರಕರಣದ (2)ನೇ ಉಪ ಪ್ರಕರಣ ದೇವಸ್ಥಾನಗಳನ್ನು ಅವುಗಳ ಆದಾಯದ ಆಧಾರದ ಮೇಲೆ ಎರಡು ಅಥವಾ ಹೆಚ್ಚು ವರ್ಗಗಳಾಗಿ ವರ್ಗೀಕರಿಸಲು ನಿಯಮಗಳನ್ನು ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 12:** ಸೇರಿಸಲು ಉದ್ದೇಶಿಸಲಾದ 20ನೇ ಪ್ರಕರಣದ (2)ನೇ ಉಪ-ಖಂಡವು, ಪರಿಷತ್ತಿನ ಸಭೆಗಳಲ್ಲಿ ಹಾಜರಾಗುವಂಥ ವ್ಯಕ್ತಿಗಳಿಗೆ ಭತ್ಯೆಯನ್ನು ನಿಗದಿಪಡಿಸಲು ರಾಜ್ಯ ಧಾರ್ಮಿಕ ಪರಿಷತ್ತನ್ನು ಸಮರ್ಥಗೊಳಿಸುವುದಕ್ಕೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 13:** ಸೇರಿಸಲು ಉದ್ದೇಶಿಸಲಾದ 21ನೇ ಪ್ರಕರಣವು,

(i) ಸಭೆಯ ಮಧ್ಯಂತರಗಳನ್ನು ನಿಯಮಿಸಲು ಹಾಗೂ

(ii) ರಾಜ್ಯ ಧಾರ್ಮಿಕ ಪರಿಷತ್ತು ಮತ್ತು ಜಿಲ್ಲಾ ಧಾರ್ಮಿಕ ಪರಿಷತ್ತಿನ ಸದಸ್ಯರಿಗೆ ಸಂದಾಯ ಮಾಡಬೇಕಾದ ಉಪದೇಶನ ಶುಲ್ಕಗಳು ಹಾಗೂ ಭತ್ಯೆಗಳನ್ನು ನಿಗದಿಪಡಿಸಲು,

ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 16:** ಸೇರಿಸಲು ಉದ್ದೇಶಿಸಲಾದ 24–ಎ ಪ್ರಕರಣದ (3)ನೇ ಉಪ–ಪ್ರಕರಣವು, ಅಧಿಸೂಚಿತ ಸಂಸ್ಥೆಯ ಸಂಬಂಧದಲ್ಲಿ ಕಾರ್ಯ ನಿರ್ವಹಣಾಧಿಕಾರಿಯ ಪ್ರಕಾರ್ಯಗಳನ್ನು ನಿರ್ವಹಿಸಲು ಆತನನ್ನು ಸಮರ್ಥಗೊಳಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 23:** ಪ್ರತಿಯೋಜಿಸಲು ಉದ್ದೇಶಿಸಿದ 31ನೇ ಪ್ರಕರಣದ (7)ನೇ ಉಪ–ಪ್ರಕರಣವು, ಈ ತಿದ್ದುಪಡಿ ಅಧಿನಿಯಮವು ಆರಂಭವಾದ ದಿನಾಂಕದಿಂದ ಎಲ್ಲಾ ಅಧಿಸೂಚಿತ ಸಂಸ್ಥೆಗಳು ಸ್ವತ್ತಿನ ಪಟ್ಟಿಯನ್ನು ಪ್ರಕಟಿಸುವುದಕ್ಕೆ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಡಾ. ವಿ.ಎಸ್. ಆಚಾರ್ಯ**
ಉನ್ನತ ಶಿಕ್ಷಣ, ಯೋಜನೆ, ಸಾಂಖ್ಯಿಕ, ಮುಜರಾಯಿ,
ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವರು

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಅನುಬಂಧ**

**ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ (2001ರ ಕರ್ನಾಟಕ ಅಧಿನಿಯಮ 33) ಉದ್ಧೃತ ಭಾಗ**

**Xx xx xx**

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ, ಪ್ರಾರಂಭ ಮತ್ತು ಅನ್ವಯ.**– (1)

**Xx xx xx**

4) ಇದು.–

i) ಒಂದು ಮಠಕ್ಕೆ ಅಥವಾ ಅದಕ್ಕೆ ಸೇರಿದ ಒಂದು ದೇವಸ್ಥಾನಕ್ಕೆ;

ii) ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ, ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ,

– ಅನ್ವಯಿಸತಕ್ಕದ್ದಲ್ಲ.

**Xx xx xx**

2. **ಪರಿಭಾಷೆಗಳು.**– ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯ ಪಡಿಸಿದ ಹೊರತು,–

1) "ಸಲಹಾ ಸಮಿತಿ" ಎಂದರೆ 20ನೇ ಪ್ರಕರಣದ ಅಡಿಯಲ್ಲಿ ರಚಿತವಾದ ಸಮಿತಿ;

**Xx xx xx**

5) "ಧರ್ಮಾದಾಯ ದತ್ತಿ" ಎಂದರೆ ಯಾವುದೇ ಧರ್ಮಾದಾಯದ ಉದ್ದೇಶಕ್ಕಾಗಿ ಇರುವ ಅಥವಾ ಅದಕ್ಕೆ ನೀಡಲಾದ ಅಥವಾ ದತ್ತಿ ಬಿಡಲಾದ ಎಲ್ಲ ಸ್ವತ್ತು ಮತ್ತು ಇದು ಸಂಬಂಧಪಟ್ಟ ಧರ್ಮಾದಾಯ ಸಂಸ್ಥೆಯನ್ನು ಒಳಗೊಳ್ಳುತ್ತದೆ. ಆದರೆ ಧರ್ಮಾದಾಯ ದತ್ತಿಗಳಲ್ಲದ, ಇತರ ಉದ್ದೇಶಕ್ಕಾಗಿ ಸ್ಥಾಪಿತವಾದ ಸಂಸ್ಥೆಗಳನ್ನು ಒಳಗೊಂಡಿರುವ ಒಂದು ಸಂಯುಕ್ತ ಸಂಸ್ಥೆಯ ಬೇರ್ಪಡಿಸಲಾಗದ ಅವಿಭಾಜ್ಯ ಅಂಗವಾಗಿರುವಂಥ ಧರ್ಮಾದಾಯ ದತ್ತಿಯನ್ನು ಒಳಗೊಳ್ಳುವುದಿಲ್ಲ;

**ವಿವರಣೆ.-** ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಅಥವಾ ತರುವಾಯ ಧರ್ಮಾದಾಯ ಸಂಸ್ಥೆಯು ಅಸ್ತಿತ್ವದಲ್ಲಿರುವುದು ನಿಂತು ಹೋಗಿದ್ದರೂ ಅಥವಾ ಸ್ವತ್ತನ್ನು ಯಾವುದೇ ಧರ್ಮಾದಾಯ ಉದ್ದೇಶಕ್ಕಾಗಿ ಹಾಗೆ ಬಳಸುವುದು ನಿಂತು ಹೋಗಿದ್ದರೂ ಅಥವಾ ದತ್ತಿಯ ಉದ್ದೇಶಗಳ ನೆರವೇರಿಕೆಯು ನಿಂತು ಹೋಗಿದ್ದರೂ, ಒಂದು ಧರ್ಮಾದಾಯ ಸಂಸ್ಥೆಗೆ ಸೇರಿದ ಅಥವಾ ಅದರ ಪೋಷಣೆ ಅಥವಾ ನಿರ್ವಹಣೆಗಾಗಿ ನೀಡಿದ ಅಥವಾ ದತ್ತಿಬಿಟ್ಟ ಅಥವಾ ಯಾವುದೇ ಧರ್ಮಾದಾಯ ಉದ್ದೇಶಕ್ಕಾಗಿ ನೀಡಿದ, ದತ್ತಿ ಬಿಟ್ಟ ಅಥವಾ ಹಕ್ಕು ಎಂಬಂತೆ ಬಳಸಿಕೊಂಡ ಯಾವುದೇ ಸ್ವತ್ತನ್ನು ಈ ಪರಿಭಾಷೆಯ ಅರ್ಥ ವ್ಯಾಪ್ತಿಯಲ್ಲಿ ಧರ್ಮಾದಾಯ ದತ್ತಿ ಎಂದು ಭಾವಿಸತಕ್ಕದ್ದು;

6) "ಧರ್ಮಾದಾಯ ಸಂಸ್ಥೆ" ಎಂದರೆ, ಧರ್ಮಾದಾಯ ಉದ್ದೇಶಕ್ಕಾಗಿ ರಚಿತವಾದ ಅಥವಾ ನಿರ್ವಹಿಸಲಾದ, ಪ್ರತ್ಯೇಕ ಅಸ್ತಿತ್ವ ಹೊಂದಿರುವ ಯಾವುದೇ ಸ್ಥಾಪನೆ, ಉದ್ಯಮ, ಸಂಘ ಅಥವಾ ಸಂಸ್ಥೆ ಮತ್ತು ಇದು ನಿರ್ದಿಷ್ಟ ದತ್ತಿಯನ್ನು ಒಳಗೊಳ್ಳುತ್ತದೆ; ಆದರೆ

ಎ) ಸಂಸ್ಥೆಯ ಮೇಲೆ ಮತ್ತು ಅದರ ಆದಾಯದ ಮೇಲೆ ಮಾಲೀಕತ್ವದ ಹಕ್ಕನ್ನು ಹೊಂದಿರುವ, ವಂಶಪಾರಂಪರ್ಯ ನ್ಯಾಸಧಾರಿಯು ನಿರ್ವಹಿಸುತ್ತಿರುವ ಒಂದು ಸಂಸ್ಥೆಯನ್ನು; ಮತ್ತು

ಬಿ) ಧರ್ಮಾದಾಯ ಸಂಸ್ಥೆಗಳನ್ನಲ್ಲದೆ ಇತರ ಸಂಸ್ಥೆಗಳನ್ನು ಸಹ ಒಳಗೊಂಡಿರುವ ಒಂದು ಸಂಯುಕ್ತ ಸಂಸ್ಥೆಯ ಬೇರ್ಪಡಿಸಲಾಗದ ಅವಿಭಾಜ್ಯ ಅಂಗವಾಗಿರುವಂಥ ಒಂದು ಸಂಸ್ಥೆಯನ್ನು

- ಒಳಗೊಳ್ಳುವುದಿಲ್ಲ;

**Xx** **xx** **xx**

10) "ಸಾಮಾನ್ಯ ಸಂಗ್ರಹಣ ನಿಧಿ" ಎಂದರೆ 17ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿಸಲಾದ ನಿಧಿ;

**Xx** **xx** **xx**

12) "ಘೋಷಿತ ಸಂಸ್ಥೆ" ಎಂದರೆ 42ನೇ ಪ್ರಕರಣದ ಅಡಿಯಲ್ಲಿ ಘೋಷಿತವಾದ ಸಂಸ್ಥೆ;

**Xx** **xx** **xx**

14) "ಕಾರ್ಯನಿರ್ವಹಣಾಧಿಕಾರಿ" ಎಂದರೆ ಈ ಅಧಿನಿಯಮದ ಉಪ ಬಂಧಗಳಡಿಯಲ್ಲಿ ಹಾಗೆಂದು ನೇಮಕಗೊಂಡ ಒಬ್ಬ ಅಧಿಕಾರಿ;

15) "ವಂಶಪಾರಂಪರ್ಯ ಪದಧಾರಕ" ಮತ್ತು "ವಂಶಪಾರಂಪರ್ಯ ನ್ಯಾಸಧಾರಿ""ಎಂದರೆ, ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆ ಅಥವಾ ಧರ್ಮಾದಾಯ ದತ್ತಿಯ ಸಂಸ್ಥಾಪಕನು ವಿಧಿಸಿದ ಉತ್ತರಾಧಿಕಾರ ನಿಯಮಕ್ಕನುಸಾರವಾಗಿ ಅಥವಾ ಸಂಸ್ಥೆ ಅಥವಾ ದತ್ತಿಗೆ ಅನ್ವಯಿಸುವ ಆಚರಣೆ ಅಥವಾ ಪದ್ಧತಿಗನುಸಾರವಾಗಿ ಅಥವಾ ಸಂದರ್ಭಾನುಸಾರ ತತ್ಕಾಲದಲ್ಲಿ ಜಾರಿಯಲ್ಲಿರುವ ಉತ್ತರಾಧಿಕಾರದ ಕಾನೂನಿಗೆ ಅನುಸಾರವಾಗಿ ಯಾರಿಗೆ ಆ ಪದದ ಉತ್ತರಾಧಿಕಾರಿ ಪ್ರಾಪ್ತವಾಗುವುದೋ ಆ ಪದಧಾರಕ ಮತ್ತು ನ್ಯಾಸಧಾರಿ;

16) "ಹಿಂದೂ" ಎನ್ನುವುದರಲ್ಲಿ ಒಬ್ಬ ಬೌದ್ಧ, ಜೈನ ಅಥವಾ ಸಿಖ್ಖನು ಸೇರುವುದಿಲ್ಲ.

17) "ಹಿಂದೂ ಧಾರ್ಮಿಕ ಸಂಸ್ಥೆ" ಎಂದರೆ ಒಂದು ದೇವಸ್ಥಾನ ಅಥವಾ ನಿರ್ದಿಷ್ಟ ದತ್ತಿ ಮತ್ತು ಇದು ಒಂದು ಬೃಂದಾವನ, ಸಮಾಧಿ, ಗದ್ದಿಗೆ, ಮಂದಿರ, ಗುಡಿ, ಅಥವಾ ಹಿಂದೂ ಧಾರ್ಮಿಕ ಉದ್ದೇಶಕ್ಕಾಗಿ ಸ್ಥಾಪಿಸಲಾದ ಅಥವಾ ನಿರ್ವಹಿಸಲಾದ ಯಾವುದೇ ಇತರ ಸಂಸ್ಥೆಯ ಸ್ಥಳವನ್ನು ಒಳಗೊಳ್ಳುತ್ತದೆ;

**Xx** **xx** **xx**

27) "ದೇವಸ್ಥಾನ" ಎಂದರೆ ಯಾವುದೇ ಹೆಸರಿನಿಂದ ಪರಿಚಿತವಿರುವ, ಪ್ರತ್ಯೇಕ ಅಸ್ತಿತ್ವ ಹೊಂದಿರುವ, ಒಂದು ಸಾರ್ವಜನಿಕ ಧಾರ್ಮಿಕ ಪೂಜಾಸ್ಥಳವನ್ನಾಗಿ ಬಳಸಲಾಗುವ ಮತ್ತು ಹಿಂದೂ ಸಮುದಾಯ ಅಥವಾ ಅದರ ಯಾವುದೇ ವರ್ಗಕ್ಕಾಗಿ ಅಥವಾ ಅದರ ಪ್ರಯೋಜನಕ್ಕಾಗಿ ಸಮರ್ಪಿಸಲಾದ ಅಥವಾ ಹಕ್ಕು ಎಂಬಂತೆ ಸಾರ್ವಜನಿಕ ಧಾರ್ಮಿಕ ಪೂಜಾಸ್ಥಳವಾಗಿ ಬಳಸುವ ಒಂದು ಸ್ಥಳ ಮತ್ತು ಇದು ಮಂದಿರ, ಸಮಾಧಿ, ಬೃಂದಾವನ, ಗದ್ದಿಗೆ, ಗುಡಿ, ಉಪದೇವಾಲಯಗಳು, ಉತ್ಸವ ಮಂಟಪಗಳು, ಕಲ್ಯಾಣಿಗಳು ಅಥವಾ ಇತರ ಅವಶ್ಯಕ ಲಗತ್ತಾದ ಸ್ಥಳಗಳು, ನಿರ್ಮಿತಿಗಳು ಮತ್ತು ಭೂಮಿಯನ್ನು ಒಳಗೊಳ್ಳುತ್ತದೆ. ಆದರೆ ದೇವಸ್ಥಾನವಲ್ಲದೆ ಸಂಸ್ಥೆಗಳನ್ನು ಒಳಗೊಂಡಿರುವ ಒಂದು ಸಂಯುಕ್ತ ಸಂಸ್ಥೆಯ ಬೇರ್ಪಡಿಸಲಾಗದ ಅವಿಭಾಜ್ಯ ಅಂಗವಾದಂಥ ದೇವಸ್ಥಾನವನ್ನು ಒಳಗೊಳ್ಳುವುದಿಲ್ಲ.

**Xx** **xx** **xx**

3. **ಆಯುಕ್ತ.-** (1) **Xx** **xx** **xx**

2) ಆಯುಕ್ತನು ಏಕಮಾತ್ರ ನಿಗಮವಾಗಿರತಕ್ಕದ್ದು ಮತ್ತು ಶಾಶ್ವತ ಉತ್ತರಾಧಿಕಾರ ಹಾಗೂ ಸಾಮಾನ್ಯ ಮೊಹರನ್ನು ಹೊಂದಿರತಕ್ಕದ್ದು ಮತ್ತು ನಿಗಮದ ಹೆಸರಿನಲ್ಲಿ ದಾವೆ ಹೂಡಬಹುದು ಮತ್ತು ದಾವೆಗೆ ಗುರಿಯಾಗಬಹುದು.

**Xx** **xx** **xx**

**4. ಉಪ-ಆಯುಕ್ತ ಮತ್ತು ಸಹಾಯಕ ಆಯುಕ್ತರು.-** (1) ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು ರಾಜ್ಯ ಸರ್ಕಾರವು, "ಎ" ವರ್ಗದ ಹಿರಿಯ ವೇತನ ಶ್ರೇಣಿಗೆ ಕಡಿಮೆಯದಲ್ಲದ ದರ್ಜೆಯ ಒಬ್ಬ ಅಧಿಕಾರಿಯನ್ನು ಒಂದು ಅಥವಾ ಹೆಚ್ಚು ಜಿಲ್ಲೆಗಳಿಗೆ ಮತ್ತು ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಉಪ ಆಯುಕ್ತನನ್ನಾಗಿ ನೇಮಕ ಮಾಡಬಹುದು. ಆಯುಕ್ತನ ಪ್ರಾಧಿಕಾರಕ್ಕೆ ಒಳಪಟ್ಟು ಉಪ ಆಯುಕ್ತನು ಅವನ ಅಧಿಕಾರ ವ್ಯಾಪ್ತಿಯಲ್ಲಿರುವ ಎಲ್ಲ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಸಂಬಂಧದಲ್ಲಿ ಈ ಅಧಿನಿಯಮದ ಉಪಬಂಧಗಳನ್ನು ನೆರವೇರಿಸುವ ಉದ್ದೇಶಕ್ಕಾಗಿ ಸಾಮಾನ್ಯ ಅಧೀಕ್ಷಣೆ ಮತ್ತು ನಿಯಂತ್ರಣ ಅಧಿಕಾರಗಳನ್ನು ಹೊಂದಿರತಕ್ಕದ್ದು.

2) ರಾಜ್ಯ ಸರ್ಕಾರವು "ಎ" ವರ್ಗದ ಕಿರಿಯ ವೇತನ ಶ್ರೇಣಿಯ ದರ್ಜೆಗೆ ಕಡಿಮೆಯಿಲ್ಲದ ದರ್ಜೆಯ ಒಬ್ಬ ಅಧಿಕಾರಿಯನ್ನು ಈ ಅಧಿನಿಯಮದ ಅಡಿಯಲ್ಲಿನ ತನ್ನ ಕರ್ತವ್ಯಗಳನ್ನು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕೆ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಉಪ ಆಯುಕ್ತನಿಗೆ ಸಹಾಯ ನೀಡುವುದಕ್ಕಾಗಿ ಮತ್ತು ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅದರ ಅಡಿಯಲ್ಲಿ ಪ್ರದತ್ತವಾದ ಅಥವಾ ಆಯುಕ್ತನ ಅನುಮೋದನೆಯೊಂದಿಗೆ ಉಪ ಆಯುಕ್ತನು ಅವನಿಗೆ ಪ್ರತ್ಯಾಯೋಜಿಸಬಹುದಾದ ಅಂಥ ಕರ್ತವ್ಯಗಳನ್ನು ನಿರ್ವಹಿಸಲು ಅಥವಾ ಅಂಥ ಅಧಿಕಾರಗಳನ್ನು ಚಲಾಯಿಸಲು ಜಿಲ್ಲೆಯ ಒಂದು ಅಥವಾ ಹೆಚ್ಚು ತಾಲ್ಲೂಕುಗಳಿಗೆ ಸಹಾಯಕ ಆಯುಕ್ತನನ್ನಾಗಿ ನೇಮಕ ಮಾಡಬಹುದು.

**Xx xx xx**

**9. ಅರ್ಚಕರ ನೇಮಕಾತಿ.-** (1) ಅಧಿಸೂಚಿತ ಸಂಸ್ಥೆಯ ಆಡಳಿತ ಸಮಿತಿಯು ಆಯುಕ್ತರ ಅನುಮೋದನೆಯೊಂದಿಗೆ ಸಂಸ್ಥೆಗೆ ಸೇರಿದ ಪ್ರತಿ ದೇವಸ್ಥಾನಕ್ಕೆ, ಒಬ್ಬರು ಅಥವಾ ಹೆಚ್ಚು ಅರ್ಚಕರನ್ನು ನೇಮಿಸಬಹುದು.

2) ಒಬ್ಬರಿಗಿಂತ ಹೆಚ್ಚು ಜನ ಅರ್ಚಕರನ್ನು ನೇಮಕ ಮಾಡಿದಲ್ಲಿ, ಅವರ ಪೈಕಿ ಹಿರಿಯನಾದವನು ಪ್ರಧಾನ ಅರ್ಚಕನಾಗಿರತಕ್ಕದ್ದು. ಅರ್ಚಕರು, ಮತ್ತು ಪ್ರಧಾನ ಅರ್ಚಕರು ನೇಮಕವಾಗಿದ್ದಲ್ಲಿ ಅವರು, ಆಡಳಿತ ಸಮಿತಿಯು ನಿರ್ದಿಷ್ಟಪಡಿಸಬಹುದಾದಂಥ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

3) ದೇವಸ್ಥಾನಕ್ಕೆ ನೇಮಕ ಮಾಡುವ ಅರ್ಚಕರ ಸಂಖ್ಯೆಯು, ದೇವಸ್ಥಾನಗಳ ಪ್ರತಿ ವರ್ಗಕ್ಕೆ ಒಂದು ಸಾಮಾನ್ಯ ಮಾದರಿಯನ್ನು ಗೊತ್ತುಪಡಿಸುವ ರಾಜ್ಯ ಸರ್ಕಾರದ ಅಧಿಕಾರಕ್ಕೆ ಬಾಧಕವಾಗದಂತೆ, ಈ ಅಧಿನಿಯಮದ ಪ್ರಾರಂಭದ ನಿಕಟ ಪೂರ್ವದಲ್ಲಿ ದೇವಸ್ಥಾನದಲ್ಲಿ ಆಚರಣೆಯಲ್ಲಿದ್ದ ಪದ್ಧತಿಗಳಿಗೆ ಅನುಸಾರವಾಗಿರತಕ್ಕದ್ದು.

**10. ಅರ್ಚಕರ ವಿದ್ಯಾರ್ಹತೆ.-** (1) ಯಾವೊಬ್ಬ ವ್ಯಕ್ತಿಯು, ಮನ್ನಣೆ ಪಡೆದ ಯಾವುದೇ ಸಂಸ್ಕೃತ ಪಾಠಶಾಲೆಯಿಂದ ಅಥವಾ ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯ ಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ ನಿರ್ದಿಷ್ಟ ಪಡಿಸಬಹುದಾದ ಇತರ ಯಾವುದೇ ಸಂಸ್ಥೆಯಿಂದ ದೇವಸ್ಥಾನದ ಪರಂಪರೆಯ ಆಗಮದಲ್ಲಿ ಕನಿಷ್ಠ ಪಕ್ಷ ಸರ್ಟಿಫಿಕೇಟ್ ಕೋರ್ಸ್‌ನಲ್ಲಿ (ವಾರ) ಉತ್ತೀರ್ಣನಾಗಿದ್ದ ಹೊರತು ಅಥವಾ ದೇವಾಲಯದ ಪರಂಪರೆಯಲ್ಲಿ ಕೊನೆಯ ಪಕ್ಷ ಮೂರು ವರ್ಷಗಳ ಕಾಲ ಅರ್ಚಕನಾಗಿ ಸೇವೆ ಸಲ್ಲಿಸಿದ್ದ ಹೊರತು ಅವನನ್ನು ಅರ್ಚಕನನ್ನಾಗಿ ನೇಮಕ ಮಾಡತಕ್ಕದ್ದಲ್ಲ.

2) ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಯಾವುದೇ ದೇವಸ್ಥಾನದಲ್ಲಿ ಈ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ವಿದ್ಯಾರ್ಹತೆಗಳನ್ನು ಹೊಂದಿರದೆ ಸೇವೆ ಸಲ್ಲಿಸುತ್ತಿರುವ ಯಾವೊಬ್ಬ ಅರ್ಚಕನು ನಲವತ್ತು ವರ್ಷ ವಯಸ್ಸನ್ನು ತಲುಪಿದರೆ ಅವನನ್ನು ಅನರ್ಹಗೊಳಿಸತಕ್ಕದ್ದಲ್ಲ.

3) ವಿಶೇಷ ಸಂದರ್ಭಗಳಲ್ಲಿ ದೇವಸ್ಥಾನದಲ್ಲಿ ಪೂಜೆ ನಿರ್ವಹಿಸಲು ಯಾವುದೇ ದೇವಸ್ಥಾನದಲ್ಲಿ ನೇಮಕ ಮಾಡಲಾದ ಆಗಮಿಕ ಅಥವಾ ತಂತ್ರಿಯು, ಆಡಳಿತ ಸಮಿತಿಯು ನಿರ್ದಿಷ್ಟಪಡಿಸಬಹುದಾದಂಥ ಪ್ರಕಾರ್ಯಗಳನ್ನು ನಿರ್ವಹಿಸುವುದನ್ನು ಮುಂದುವರಿಸತಕ್ಕದ್ದು ಮತ್ತು ನಿರ್ದಿಷ್ಟಪಡಿಸಬಹುದಾದಂಥ ಸೇವಾ ಷರತ್ತುಗಳಿಂದ ಪರಿಪಾಲಿತನಾಗತಕ್ಕದ್ದು.

ಪರಂತು ಯಾವೊಬ್ಬ ವ್ಯಕ್ತಿಯನ್ನು, ಪಾರಂಪರಿಕ ಶಿಕ್ಷಣ ನೀಡುವ ಯಾವುದೇ ಸಂಸ್ಕೃತ ಪಾಠಶಾಲೆಯ ಅಥವಾ ಇತರ ಸಂಸ್ಥೆಗಳ ಆಗಮ ಪ್ರವೀಣ ಕೋರ್ಸ್‌ನಲ್ಲಿ ಉತ್ತೀರ್ಣನಾಗಿದ್ದ ಹೊರತು ಆಗಮಿಕ ಅಥವಾ ತಂತ್ರಿಯಾಗಿ ಪೂಜೆ ನಡೆಸಲು ಈ ಅಧಿನಿಯಮದ ಪ್ರಾರಂಭದ ತರುವಾಯ ನೇಮಕ ಮಾಡತಕ್ಕದ್ದಲ್ಲ.

**Xx xx xx**

**12. ಅರ್ಚಕರ ಉಪಲಬ್ಧಿಗಳು ಮತ್ತು ಸೇವಾ ಷರತ್ತುಗಳು.-** (1) ರಾಜ್ಯ ಸರ್ಕಾರವು, ನಿಯಮಗಳ ಮೂಲಕ ಅರ್ಚಕರ ಉಪಲಬ್ಧಿಗಳನ್ನು, ಕೆಲಸದ ವೇಳೆ ಮತ್ತು ಇತರ ಸೇವಾ ಷರತ್ತುಗಳನ್ನು ನಿಯಂತ್ರಣಗೊಳಿಸಬಹುದು. ಅಂಥ ನಿಯಮಗಳು, ನೇಮಕಾತಿ ಮತ್ತು ಉದ್ಯೋಗದಿಂದ ತೆಗೆದುಹಾಕುವುದು, ರಜೆ ಮತ್ತು ಕೆಲಸದ ವೇಳೆ, ಸರದಿ ಮೇಲೆ ಕೆಲಸ ಮಾಡುವುದು, ಸೇವಾಂತ ಅನುಕೂಲಗಳು, ದುರ್ನಡತೆ ಮತ್ತು ಶಿಸ್ತು ಕ್ರಮದ ಬಗ್ಗೆ ಉಪಬಂಧ ಕಲ್ಪಿಸಬಹುದು.

2) ಅರ್ಚಕರಿಗೆ ಸಂದಾಯವಾಗಬೇಕಾದ ಉಪಲಬ್ಧಿಗಳನ್ನು ಮತ್ತು ಇತರ ಹಣಕಾಸು ಸೌಲಭ್ಯಗಳನ್ನು, ದೇವಸ್ಥಾನದ ಆದಾಯವನ್ನು ಪರಿಗಣಿಸಿ ನಿಯಮಿಸತಕ್ಕದ್ದು ಮತ್ತು ಈ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ದೇವಸ್ಥಾನಗಳನ್ನು ಅವುಗಳ ಸಂಪನ್ಮೂಲಗಳ ಆಧಾರದ ಮೇಲೆ ಎರಡು ಅಥವಾ ಹೆಚ್ಚು ವರ್ಗಗಳನ್ನಾಗಿ ವಿಂಗಡಿಸಬಹುದು.

3) ಎಲ್ಲ ವರ್ಗದ ದೇವಸ್ಥಾನಗಳ ಅರ್ಚಕರುಗಳಿಗೆ ಸಂದಾಯವಾಗಬೇಕಾದ ಉಪಲಬ್ಧಿಗಳನ್ನು ನಿರ್ಧರಿಸುವಾಗ ರಾಜ್ಯ ಸರ್ಕಾರವು ಈ ಮುಂದಿನವುಗಳನ್ನು ಪರಿಗಣಿಸತಕ್ಕದ್ದು, ಎಂದರೆ.-

i) ಪೂಜೆ ಅಥವಾ ಇತರ ಸೇವೆಯ ಸಮಯದಲ್ಲಿ ಭಕ್ತರು ನೀಡುವ ತಟ್ಟೆಕಾಸು ಮತ್ತು ಇತರ ಕಾಣಿಕೆಗಳನ್ನು ವಿನಿಯೋಗಿಸಲು ಅರ್ಚಕರಿಗೆ ಇರುವ ಹಕ್ಕು;

ii) ದೇವಸ್ಥಾನಗಳಲ್ಲಿ ಸಲ್ಲಿಸಲಾಗುವ ವಿವಿಧ ಸೇವೆಗಳಿಗಾಗಿ ವ್ಯವಸ್ಥಾಪಕ ಸಮಿತಿಯು ಗೊತ್ತುಪಡಿಸುವ ಶುಲ್ಕಗಳ ಶೇಕಡಾವಾರಾಗಿ ಅರ್ಚಕರು ಪಡೆಯಬಹುದಾದ ಯಾವುದೇ ಮೊಬಲಗು;

iii) ಉದ್ಯೋಗದ ಅವಧಿಯಲ್ಲಿ ಅರ್ಚಕರು ದೇವಸ್ಥಾನದ ಸೇವೆಗಳನ್ನು ಹೊರತುಪಡಿಸಿ ಕೈಗೊಳ್ಳಬಹುದಾದ ಇತರ ಉಪವೃತ್ತಿ;

iv) ದಿನನಿತ್ಯ ಪೂಜೆಗಳನ್ನು ಮತ್ತು ಇತರೆ ಸೇವೆಗಳನ್ನು ನೆರವೇರಿಸುವುದಕ್ಕಾಗಿ ದೇವಸ್ಥಾನಗಳನ್ನು ತೆರೆದಿಡಲು ವ್ಯವಸ್ಥಾಪಕ ಸಮಿತಿ ಅಥವಾ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಿರುವ ಸಮಯವೇನಾದರೂ ಇದ್ದರೆ ಅದು;

v) ಅರ್ಚಕರುಗಳ ನಿವಾಸ ಮತ್ತು ಜೀವನೋಪಾಯಕ್ಕಾಗಿ ವ್ಯವಸ್ಥಾಪಕ ಸಮಿತಿಯು ನೀಡುವ ವಸತಿ ಮತ್ತು ವಸ್ತುರೂಪದ ಇತರ ಸೌಲಭ್ಯಗಳು.

4) ಹಾಗೆ ನಿರ್ಧರಿಸಲಾದ ಮೊಬಲಗು, ದೇವಸ್ಥಾನದ ವರ್ಗವನ್ನು ದೃಷ್ಟಿಯಲ್ಲಿಟ್ಟುಕೊಂಡು, ನಿಯಮಗಳಲ್ಲಿ ನಿಯಮಿಸಬಹುದಾದಂತೆ ಕನಿಷ್ಠ ದರಕ್ಕೆ ಕಡಿಮೆ ಇಲ್ಲದಂತೆ ಮತ್ತು ಗರಿಷ್ಠ ದರಕ್ಕೆ ಹೆಚ್ಚಿಲ್ಲದಂತೆ ಇರತಕ್ಕದ್ದು.

**ವಿವರಣೆ.-** ಈ ಪ್ರಕರಣದ ಉದ್ದೇಶಕ್ಕಾಗಿ "ಅರ್ಚಕ" ಎಂಬ ಪದದಲ್ಲಿ ಯಾವುದೇ ದೇವಸ್ಥಾನದಲ್ಲಿ ನೇಮಕ ಮಾಡಲಾದ ಆಗಮಿಕ, ತಂತ್ರಿ ಅಥವಾ ಪ್ರಧಾನ ಅರ್ಚಕನು ಸೇರುತ್ತಾನೆ.

**Xx xx xx**

**17. ಸಾಮಾನ್ಯ ಸಂಗ್ರಹಣ ನಿಧಿಯ ಸೃಜನೆ.-** ಆಯುಕ್ತನು, ಈ ಮುಂದಿನವುಗಳಿಂದ ಸಾಮಾನ್ಯ ಸಂಗ್ರಹಣ ನಿಧಿ ಎಂದು ಕರೆಯಲಾಗುವ ಒಂದು ನಿಧಿಯನ್ನು ಸೃಜಿಸುವುದು ಕಾನೂನು ಸಮ್ಮತವಾಗಿರತಕ್ಕದ್ದು.

ಎ) ಅಧಿಸೂಚಿತ ಸಂಸ್ಥೆಗಳು ತಮ್ಮ ಒಟ್ಟು ವಾರ್ಷಿಕ ಆದಾಯದ ಶೇಕಡ ಐದರಂತೆ ನೀಡಿದ ವಂತಿಗೆಗಳು, ಆದರೆ ಮೊದಲು ಈ ಮುಂದಿನವುಗಳನ್ನು ಕಳೆದಿರಬೇಕು.

i) ಬಂಡವಾಳಕ್ಕೆ ವಂತಿಗೆ ಎಂಬಂತೆ ನೀಡಲಾದ ಕೊಡುಗೆಗಳು.

ii) ಸಂಸ್ಥೆಗೆ ಸೇರಿದ ಒಡವೆಗಳು ಅಥವಾ ಇತರ ಚರ ಅಥವಾ ಸ್ಥಿರ ಸ್ವತ್ತುಗಳ ಮಾರಾಟದಿಂದ ಬಂದ ಮೊತ್ತ.

iii) ಸೇವೆ ಅಥವಾ ಧರ್ಮ ಕಾರ್ಯವನ್ನು ನೆರವೇರಿಸಿದಾಗ ನಿರ್ದಿಷ್ಟ ಸೇವೆಗಳು ಅಥವಾ ಧರ್ಮ ಕಾರ್ಯಗಳಿಗಾಗಿ ಸ್ವೀಕರಿಸಿದ ಮೊತ್ತ.

ಬಿ) ರಾಜ್ಯ ಸರ್ಕಾರದಿಂದ ಪಡೆದ ಅನುದಾನಗಳು.

**Xx xx xx**

**19. ಸಾಮಾನ್ಯ ಸಂಗ್ರಹಣ ನಿಧಿಯ ನಿರ್ವಹಣೆ.-** (1) ಆಯುಕ್ತನು, ಸಾಮಾನ್ಯ ಸಂಗ್ರಹಣ ನಿಧಿಯನ್ನು ಇಲ್ಲಿ ಹೇಳಿರುವ ಷರತ್ತುಗಳಿಗೊಳಪಟ್ಟು, ಈ ಮುಂದಿನ ಉದ್ದೇಶಗಳಿಗಾಗಿ ನಿರ್ವಹಿಸತಕ್ಕದ್ದು ಎಂದರೆ.-

ಎ) ಬಡತನದಲ್ಲಿರುವ ಅಥವಾ ಅಗತ್ಯ ಸಂದರ್ಭದಲ್ಲಿರುವ ಇತರ ಯಾವುದೇ ಧಾರ್ಮಿಕ ಸಂಸ್ಥೆಗೆ ಸಹಾಯ ನೀಡಿಕೆ;

ಬಿ) ಹಿಂದೂ ಧರ್ಮಕ್ಕೆ ಸಂಬಂಧಿಸಿದ ಯಾವುವೇ ಧಾರ್ಮಿಕ ಉದ್ದೇಶಗಳಿಗೆ ಸಹಾಯ ನೀಡಿಕೆ;

ಸಿ) ಸಂಸ್ಥೆಯ ಧಾರ್ಮಿಕ ಸಿದ್ಧಾಂತಗಳ ಪ್ರಚಾರ;

ಡಿ) ವೇದಪಾಠಶಾಲೆಗಳು, ಆಗಮ ಪಾಠಶಾಲೆಗಳು ಮತ್ತು ಅರ್ಚಕರಿಗೆ ತರಬೇತಿ ನೀಡುವ ಸಲುವಾಗಿ ಹಾಗೂ ಆ ಉದ್ದೇಶಕ್ಕಾಗಿ ಪ್ರಾಚೀನ ಬರಹಗಳ ಮತ್ತು ಭಾರತೀಯ ಭಾಷೆಗಳ ಅಧ್ಯಯನ ಮಾಡುವ ಸಲುವಾಗಿ ಶಾಲೆಗಳ ಸ್ಥಾಪನೆ ಹಾಗೂ ನಿರ್ವಹಣೆ;

ಇ) ಹಿಂದೂ ಧರ್ಮ, ತತ್ವಶಾಸ್ತ್ರ ಅಥವಾ ಶಾಸ್ತ್ರಗಳ ಅಧ್ಯಯನ ಅಥವಾ ಹಿಂದೂ ದೇವಸ್ಥಾನ ವಾಸ್ತುಶಿಲ್ಪದಲ್ಲಿ ಶಿಕ್ಷಣ ನೀಡುವ ಉದ್ದೇಶ ಹೊಂದಿರುವ ವಿಶ್ವವಿದ್ಯಾನಿಲಯ, ಕಾಲೇಜು ಅಥವಾ ಇತರ ಸಂಸ್ಥೆಯ ಸ್ಥಾಪನೆ ಮತ್ತು ನಿರ್ವಹಣೆ;

ಎಫ್) ಹಿಂದೂ ಧರ್ಮದ ವಿಷಯದಲ್ಲಿ ಶಿಕ್ಷಣವನ್ನು ನೀಡಲಾಗುವ ಶಿಕ್ಷಣ ಸಂಸ್ಥೆಗಳ ಸ್ಥಾಪನೆ ಮತ್ತು ನಿರ್ವಹಣೆ;

ಜಿ) ದೇವಸ್ಥಾನ ಕಲೆಗಳು ಮತ್ತು ವಾಸ್ತುಶಿಲ್ಪಕ್ಕೆ ಉತ್ತೇಜನ.

ಹೆಚ್) ಅನಾಥ ಹಿಂದೂ ಮಕ್ಕಳಿಗಾಗಿ ಅನಾಥಾಲಯಗಳ ಸ್ಥಾಪನೆ ಮತ್ತು ನಿರ್ವಹಣೆ;

ಐ) ಕುಷ್ಠರೋಗ ಹಾಗೂ ವಾಸಿಯಾಗದ ಇತರೆ ರೋಗಗಳಿಂದ ಬಳಲುತ್ತಿರುವ ಜನರಿಗಾಗಿ ಆಶ್ರಯ ತಾಣಗಳ ಸ್ಥಾಪನೆ ಹಾಗೂ ನಿರ್ವಹಣೆ;

ಜೆ) ನಿರ್ಗತಿಕ, ಅಸಾಹಯಕ ಹಾಗೂ ದೈಹಿಕವಾಗಿ ಅಸಮರ್ಥರಾದ ಜನರಿಗಾಗಿ ಆಶ್ರಯ ಧಾಮಗಳ ಸ್ಥಾಪನೆ ಹಾಗೂ ನಿರ್ವಹಣೆ;

ಕೆ) ಯಾತ್ರಿಕರ ಅನುಕೂಲಕ್ಕಾಗಿ ಆಸ್ಪತ್ರೆಗಳು ಹಾಗೂ ಔಷಧಾಲಯಗಳ ಸ್ಥಾಪನೆ ಹಾಗೂ ನಿರ್ವಹಣೆ;

ಎಲ್) ಯಾವುದೇ ಇತರ ಹಿಂದೂ ಧಾರ್ಮಿಕ ಅಥವಾ ಧರ್ಮಾದಾಯ ಉದ್ದೇಶ;

2) ಸಾಮಾನ್ಯ ಸಂಗ್ರಹಣ ನಿಧಿಯನ್ನು ಈ ಮುಂದಿನಂತೆ ನಿರ್ವಹಿಸತಕ್ಕದ್ದು;

i) ಯಾವೊಬ್ಬ ವ್ಯಕ್ತಿಯಿಂದ ಸ್ವೀಕರಿಸಿದ ಯಾವುದೇ ವಂತಿಗೆ ಅಥವಾ ಕೊಡುಗೆಯನ್ನು ದಾನಿಯು ನಿರ್ದಿಷ್ಟಪಡಿಸಿದ ಉದ್ದೇಶ ಯಾವುದೇ ಇದ್ದರೆ, ಅದರ ಹೊರತಾದ ಯಾವುದೇ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.

ii) ಒಂದು ಯಾವುದೇ ಧಾರ್ಮಿಕ ಸಂಪ್ರದಾಯದ ಅಥವಾ ಅದರ ಯಾವುದೇ ಭಾಗದ ಸಂಸ್ಥೆಗೆ ನೀಡಿದ ವಂತಿಗೆಗಳು ಮತ್ತು ಕೊಡುಗೆಗಳನ್ನು ಆ ನಿರ್ದಿಷ್ಟ ವರ್ಗ, ಸಂಪ್ರದಾಯ ಅಥವಾ ಭಾಗದ ಅನುಕೂಲಕ್ಕಾಗಿ ಮಾತ್ರವೇ ಬಳಸತಕ್ಕದ್ದು.

3) ಆಯುಕ್ತನು, ಸಲಹಾ ಸಮಿತಿಯ ಅನುಮೋದನೆಯೊಂದಿಗೆ, ವಾರ್ಷಿಕ ಒಟ್ಟು ಆದಾಯವು ಮೂರು ಸಾವಿರ ರೂಪಾಯಿಗಳಿಗಿಂತ ಹೆಚ್ಚಿಲ್ಲದ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆ ಅಥವಾ ಧರ್ಮಾದಾಯ ದತ್ತಿಯನ್ನು ಅದನ್ನು ನಿರ್ವಹಿಸುವುದಕ್ಕಾಗಿ ಮತ್ತು ಸುಸ್ಥಿತಿಯಲ್ಲಿ ಇರಿಸಿಕೊಳ್ಳುವುದಕ್ಕಾಗಿ ಅದಕ್ಕಿಂತ ದೊಡ್ಡ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆ ಅಥವಾ ಧರ್ಮಾದಾಯ ದತ್ತಿಯು ದತ್ತು ತೆಗೆದುಕೊಳ್ಳಲು ಅನುಮತಿಸುವುದು ಕಾನೂನು ಸಮ್ಮತವಾಗಿರತಕ್ಕದ್ದು.

**20. ಸಲಹಾ ಸಮಿತಿಯ ರಚನೆ.–** (1) ರಾಜ್ಯ ಸರ್ಕಾರವು, ಕರ್ನಾಟಕ ರಾಜ್ಯಕ್ಕಾಗಿ ಈ ಮುಂದಿನ ಸದಸ್ಯರನ್ನೊಳಗೊಂಡ ಸಲಹಾ ಸಮಿತಿ ಎಂಬ ಹೆಸರಿನ ಒಂದು ಸಮಿತಿಯನ್ನು ರಚಿಸತಕ್ಕದ್ದು ಎಂದರೆ.–

ಎ) ದತ್ತಿಗಳ ಇಲಾಖೆಯ ಪ್ರಭಾರದಲ್ಲಿರುವ ಮಂತ್ರಿಗಳು ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು.

ಬಿ) ಆಯುಕ್ತರು, ಪದನಿಮಿತ್ತ ಸದಸ್ಯ ಕಾರ್ಯದರ್ಶಿಯವರಾಗಿರತಕ್ಕದ್ದು.

ಸಿ) ವೈದಿಕ ಹಾಗೂ ವೈದಿಕವಲ್ಲದ ಈ ಎರಡೂ ಹಿಂದೂ ವಿಚಾರ ಧಾರೆಗಳ ವಿವಿಧ ವರ್ಗಗಳ ಧಾರ್ಮಿಕ ಮುಖಂಡರ ಪೈಕಿಯಿಂದ ಒಂಭತ್ತಕ್ಕೆ ಮೀರದಷ್ಟು ಸದಸ್ಯರನ್ನು ಅಧಿಕಾರೇತರ ಸದಸ್ಯರನ್ನಾಗಿ ಸರ್ಕಾರವು ನಾಮನಿರ್ದೇಶಿಸತಕ್ಕದ್ದು, ಇವರ ಪೈಕಿ ಕನಿಷ್ಠ ಪಕ್ಷ ಒಬ್ಬರು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರತಕ್ಕದ್ದು. ಮತ್ತು ಇಬ್ಬರು ಮಹಿಳೆಯರಾಗಿರತಕ್ಕದ್ದು.

2) ಅಧಿಕಾರೇತರ ಸದಸ್ಯರ ಪದಾವಧಿಯು, ಮೂರು ವರ್ಷಗಳಾಗಿರತಕ್ಕದ್ದು ಮತ್ತು ಸಲಹಾ ಸಮಿತಿಯ ವ್ಯವಹಾರಗಳನ್ನು ನಡೆಸುವುದಕ್ಕೆ ಸಂಬಂಧಪಟ್ಟ ಇತರ ವಿಷಯಗಳು ನಿಯಮಿಸಬಹುದಾದಂಥವುಗಳಾಗಿರತಕ್ಕದ್ದು.

**21. ಸದಸ್ಯರ ಅನರ್ಹತೆ.–** ಒಬ್ಬ ವ್ಯಕ್ತಿಯು,

ಎ) ಭಾರತದ ನಾಗರೀಕರನಾಗಿರದಿದ್ದರೆ,

ಬಿ) ಅವನು ಇಪ್ಪತ್ತೈದು ವರ್ಷ ವಯಸ್ಸಿನವನಾಗಿರದಿದ್ದರೆ;

ಸಿ) ಅವನು ಅವಿಮುಕ್ತ ದಿವಾಳಿದಾರನೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲಾಗಿದ್ದರೆ;

ಡಿ) ಅವನು ಅಸ್ವಸ್ಥಚಿತ್ತನಾಗಿದ್ದರೆ ಅಥವಾ ಅವನು ಅಂಥ ಸದಸ್ಯನಾಗಿ ಕಾರ್ಯನಿರ್ವಹಿಸಲು ಅಸಮರ್ಥನಾಗುವಂಥ ಯಾವುದೇ ಮಾನಸಿಕ ನ್ಯೂನತೆ ಅಥವಾ ದೌರ್ಬಲ್ಯದಿಂದ ಬಳಲುತ್ತಿದ್ದರೆ;

ಇ) ನೈತಿಕ ಅಧಃಪತನವನ್ನು ಒಳಗೊಂಡ ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ದೋಷಸಿದ್ಧಿಯಾಗಿದ್ದರೆ ಅಥವಾ ಶಿಕ್ಷಿಸಲ್ಪಟ್ಟಿದ್ದರೆ, ಅಂತಹ ಶಿಕ್ಷೆಯನ್ನು ವಿಪರ್ಯಾಗೊಳಿಸಿರದಿದ್ದರೆ ಅಥವಾ ಅಪರಾಧವನ್ನು ಕ್ಷಮಿಸಿರದಿದ್ದರೆ,

– ಸಲಹಾ ಸಮಿತಿಯಲ್ಲಿ ಅಧಿಕಾರೇತರ ಸದಸ್ಯನಾಗಿ ನೇಮಕಗೊಳ್ಳಲು ಅಥವಾ ಪದದಲ್ಲಿ ಮುಂದುವರಿಯಲು ಅರ್ಹನಾಗಿರತಕ್ಕದ್ದಲ್ಲ.

**Xx xx xx**

**23. ಅಧಿಸೂಚಿತ ಸಂಸ್ಥೆಗಳು.–** ರಾಜ್ಯ ಸರ್ಕಾರವು, ಈ ಅಧಿನಿಯಮವು ಪ್ರಾರಂಭವಾದ ತರುವಾಯ ಸಾಧ್ಯವಾದಷ್ಟು ಬೇಗನೇ, ಅಧಿಸೂಚನೆಯ ಮೂಲಕ, ಪ್ರತಿಯೊಂದು ರೆವಿನ್ಯೂ ಜಿಲ್ಲೆಗೆ ಸಂಬಂಧಿಸಿದಂತೆ;

ಎ) ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ರಾಜ್ಯ ಸರ್ಕಾರದ ಏಕಸ್ವಾಮ್ಯದಲ್ಲಿರುವ ಅಥವಾ ಯಾವವುಗಳ ಪ್ರಯೋಜನಕ್ಕಾಗಿ,

(i) ಸಾರ್ವಜನಿಕ ಆದಾಯಗಳಿಂದ ಯಾವುದೇ ಶಾಶ್ವತ ಮಾಸಿಕ ಅಥವಾ ವಾರ್ಷಿಕ ಅನುದಾನವನ್ನು; ಅಥವಾ

(ii) ಮೈಸೂರು ಧಾರ್ಮಿಕ ಹಾಗೂ ಧರ್ಮಾದಾಯ ಇನಾಮುಗಳ ರದ್ದಿಯಾತಿ ಅಧಿನಿಯಮ, 1955ರ 19ನೇ ಪ್ರಕರಣದ ಅಡಿಯಲ್ಲಿನ ತಸ್ಥೀಕ್ ಭತ್ಯೆವನ್ನು

– ನೀಡಲಾಗುತ್ತಿದೆಯೋ ಅಂಥ ಎಲ್ಲ ಧರ್ಮಾದಾಯ ಸಂಸ್ಥೆಗಳು ಮತ್ತು ಹಿಂದೂ ಧಾರ್ಮಿಕ ಸಂಸ್ಥೆಗಳು.

ಬಿ) ಹೈದರಾಬಾದ್ ದತ್ತಿ ವಿನಿಯಮಗಳು, 1349 ಎಫ್ ಅಡಿಯಲ್ಲಿ ದತ್ತಿ ಪುಸ್ತಕದಲ್ಲಿ ನೋಂದಾಯಿತವಾದ ಎಲ್ಲ ಸಂಸ್ಥೆಗಳು,

ಸಿ) ಆಗಿನ ಮದ್ರಾಸ್ ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1951 ಇದು ಅನ್ವಯವಾಗುವ ಎಲ್ಲ ಸಂಸ್ಥೆಗಳು;

ಡಿ) ಕೊಡಗು ದೇವಸ್ಥಾನ ನಿಧಿಗಳ ವ್ಯವಸ್ಥಾಪನಾ ಅಧಿನಿಯಮ, 1956 ಇದು ಅನ್ವಯವಾಗುವ ಕೊಡಗು ಜಿಲ್ಲೆಯಲ್ಲಿನ ಎಲ್ಲ ಸಂಸ್ಥೆಗಳು;

ಇ) ಸಾರ್ವಜನಿಕ ಆದಾಯಗಳಿಂದ ಯಾವುದೇ ಮಾಸಿಕ ಅಥವಾ ವಾರ್ಷಿಕ ಅನುದಾನ ಅಥವಾ ಕರ್ನಾಟಕ ಕೆಲವು ಇನಾಮುಗಳ (ರದ್ದಿಯಾತಿ) ಅಧಿನಿಯಮ, 1977ರ ಅಡಿಯಲ್ಲಿ ಯಾವುದೇ ಮೊಬಲಗನ್ನು ಪಡೆಯುತ್ತಿರುವ ಬಾಂಬೆ ಸಾರ್ವಜನಿಕ ನ್ಯಾಸ ಅಧಿನಿಯಮ, 1950ರ ಅಡಿಯಲ್ಲಿ ನೋಂದಾಯಿತವಾದ ಎಲ್ಲ ಹಿಂದೂ ಧಾರ್ಮಿಕ ಸಂಸ್ಥೆಗಳು;

ಎಫ್) ರೇಣುಕಾ ಎಲ್ಲಮ್ಮ ದೇವಸ್ಥಾನ (ಆಡಳಿತ) ಅಧಿನಿಯಮ, 1974 ಇದು ಅನ್ವಯವಾಗುವ ಶ್ರೀ ರೇಣುಕಾ ಎಲ್ಲಮ್ಮ ದೇವಸ್ಥಾನ, ಸವದತ್ತಿ;

– ಇವುಗಳ ಒಂದು ಪಟ್ಟಿಯನ್ನು ಪ್ರಕಟಿಸತಕ್ಕದ್ದು.

**24. ನಿಯಂತ್ರಣ ಪ್ರಾಧಿಕಾರಗಳು.–** (1) ಅಧಿಸೂಚಿತ ಸಂಸ್ಥೆಗಳಿಗೆ ಸಂಬಂಧಪಟ್ಟ ಎಲ್ಲ ವಿಷಯಗಳಿಗೆ ಆಯುಕ್ತರು ಮುಖ್ಯ ನಿಯಂತ್ರಣಾ ಪ್ರಾಧಿಕಾರವಾಗಿರತಕ್ಕದ್ದು ಮತ್ತು ಅಧಿಸೂಚಿತ ಸಂಸ್ಥೆಗಳ ಎಲ್ಲ ಅಥವಾ ಯಾವುದೇ ವರ್ಗದ ಸಂಬಂಧದಲ್ಲಿ ರಾಜ್ಯ ಸರ್ಕಾರವು ನಿಯಮಗಳ ಮೂಲಕ ವಿಧಿಸಬಹುದಾದ ಅಥವಾ ಸಂದರ್ಭಾನುಸಾರ ಅವನಿಗೆ ಪ್ರಧಾನ ಮಾಡಬಹುದಾದ. ಅಂಥ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ಮೇಲ್ವಿಚಾರಣೆ ಮತ್ತು ನಿಯಂತ್ರಣದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

2) ಉಪ ಆಯುಕ್ತನು ನಿಯಮಿಸಬಹುದಾದ ಅಂಥ ನಿಬಂಧನೆಗಳು, ಮತ್ತು ಷರತ್ತುಗಳಿಗೆ ಒಳಪಟ್ಟು ಜಿಲ್ಲೆಯ ಅಧಿಸೂಚಿತ ಸಂಸ್ಥೆಗಳ ನಿಕಟೋತ್ತರ ನಿಯಂತ್ರಣ ಪ್ರಾಧಿಕಾರವಾಗಿರತಕ್ಕದ್ದು.

3) ಸಹಾಯಕ ಆಯುಕ್ತನು ಉಪ ಆಯುಕ್ತನ ಅಧಿಕಾರಕ್ಕೆ ಒಳಪಟ್ಟು ನಿಯಮಿಸಬಹುದಾದ ಅಂಥ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

**25. ವ್ಯವಸ್ಥಾಪನಾ ಸಮಿತಿಯ ರಚನೆ.–** (1) ರಾಜ್ಯ ಸರ್ಕಾರದ ಯಾವುದೇ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೆ ಒಳಪಟ್ಟು, ನಿಯಮಿಸಲಾದ ಪ್ರಾಧಿಕಾರವು, ಒಂದು ಅಥವಾ ಹೆಚ್ಚು ಅಧಿಸೂಚಿತ ಸಂಸ್ಥೆಗಳಿಗೆ ಒಂಭತ್ತು ಸದಸ್ಯರನ್ನು ಒಳಗೊಂಡ ಒಂದು ವ್ಯವಸ್ಥಾಪನಾ ಸಮಿತಿಯನ್ನು ರಚಿಸತಕ್ಕದ್ದು; ಅಧಿಸೂಚಿತ ಸಂಸ್ಥೆಗಳ ಬೇರೆ ಬೇರೆ ವರ್ಗ ಅಥವಾ ವರ್ಗಗಳನ್ನು ಕುರಿತಂತೆ ಬೇರೆ ಬೇರೆ ಪ್ರಾಧಿಕಾರಗಳನ್ನು ನಿಯಮಿಸಬಹುದು.

2) ಎ) ನಿಯಮಿಸಲಾದ ಪ್ರಾಧಿಕಾರವು (1)ನೇ ಉಪ-ಪ್ರಕರಣದ ಅಡಿಯಲ್ಲಿ ವ್ಯವಸ್ಥಾಪನಾ ಸಮಿತಿಯನ್ನು ರಚಿಸುವಾಗ ಸಂಸ್ಥೆ ಅಥವಾ ಅದರ ಯಾವುದೇ ಶಾಖೆಯು ಯಾವ ಧಾರ್ಮಿಕ ಸಂಪ್ರದಾಯಕ್ಕೆ ಸೇರುತ್ತದೆಯೋ ಆ ಧಾರ್ಮಿಕ ಸಂಪ್ರದಾಯಕ್ಕೆ ಸೂಕ್ತ ಮನ್ನಣೆ ನೀಡತಕ್ಕದ್ದು.

ಬಿ) ವ್ಯವಸ್ಥಾಪನಾ ಸಮಿತಿಗೆ ಸದಸ್ಯರ ನೇಮಕಾತಿಯ ವಿಧಾನ, ಅವರ ಪೂರ್ವವೃತ್ತಾಂತದ ಪರಿಶೀಲನೆ ಹಾಗೂ ಇತರ ವಿಷಯಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

ಸಿ) ಯಾವೊಬ್ಬ ವ್ಯಕ್ತಿಯು ಒಂದು ಸಮಯದಲ್ಲಿ ಒಂದಕ್ಕಿಂತ ಹೆಚ್ಚು ವ್ಯವಸ್ಥಾಪನಾ ಸಮಿತಿಗಳಿಗೆ ಸದಸ್ಯನಾಗಿ ನೇಮಕ ಹೊಂದಲು ಅರ್ಹನಾಗಿರತಕ್ಕದಲ್ಲ.

3) ನಿಯಮಿಸಲಾದ ಪ್ರಾಧಿಕಾರವು, ಭಕ್ತರು, ದಾನಿಗಳು ಮತ್ತು ಹಿಂದೂ ಧಾರ್ಮಿಕ ಸಂಸ್ಥೆಗಳ ಅನುಯಾಯಿಗಳು ಅಥವಾ ಸಂದರ್ಭಾನುಸಾರ ಧರ್ಮಾದಾಯ ದತ್ತಿಗಳಿಗೆ ದತ್ತಿ ನೀಡಿರುವರು ಮತ್ತು ಅವುಗಳ ಫಲಾನುಭವಿಗಳ ಪೈಕಿಯಿಂದ ಈ ಮುಂದಿನವರನ್ನು ಒಳಗೊಂಡ ಅಂಥ ರೀತಿಯಲ್ಲಿ ಒಂದು ವ್ಯವಸ್ಥಾಪನಾ ಸಮಿತಿಯನ್ನು ರಚಿಸತಕ್ಕದ್ದು, ಎಂದರೆ.–

(i) ದೇವಸ್ಥಾನದ ಸಂದರ್ಭದಲ್ಲಿ, ಪ್ರಧಾನ ಅರ್ಚಕ ಅಥವಾ ಅರ್ಚಕ.

(ii) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದವರ ಪೈಕಿಯಿಂದ ಕೊನೆ ಪಕ್ಷ ಒಬ್ಬರು ಸದಸ್ಯರು, ಮತ್ತು

(iii) ಉಳಿದವರಲ್ಲಿ ದೇವಸ್ಥಾನದ ಸಮೀಪ ವಾಸಿಸುತ್ತಿರುವವರ ಪೈಕಿಯಿಂದ ಕೊನೆ ಪಕ್ಷ ಐದು ಜನರು, ಅವರ ಪೈಕಿ ಇಬ್ಬರು ಮಹಿಳೆಯರಾಗಿರತಕ್ಕದ್ದು.

ಪರಂತು, ರಾಜ್ಯ ಸರ್ಕಾರವು ಯಾವುದೇ ಅಧಿಸೂಚಿತ ಸಂಸ್ಥೆ ಅಥವಾ ಅಂಥ ವರ್ಗದ ಸಂಸ್ಥೆಗಳ ವಿಷಯದಲ್ಲಿ (iii)ನೇ ಖಂಡದ ಷರತ್ತನ್ನು ಮಹಿಳಾ ಸದಸ್ಯರ ಪ್ರಾತಿನಿಧ್ಯಕ್ಕೆ ಬಾಧಕವಾಗದ ರೀತಿಯಲ್ಲಿ ಸಡಿಲಿಸಬಹುದು.

ಮತ್ತು ಪರಂತು, (ii)ನೇ ಖಂಡದ ಷರತ್ತು, ಹಿಂದೂ ಧಾರ್ಮಿಕ ಸಂಪ್ರದಾಯಗಳಿಗೆ ಅಥವಾ ಅವುಗಳ ವರ್ಗಗಳಿಗೆ ಸೇರಿದ ಸಂಸ್ಥೆಗಳಿಗೆ ಅನ್ವಯಿಸತಕ್ಕದ್ದಲ್ಲ.

(4) ಯಾವೊಬ್ಬ ವ್ಯಕ್ತಿಯು–

(ಎ) ದೇವರಲ್ಲಿ ನಂಬಿಕೆಯುಳ್ಳವನಾಗಿದ್ದ ಹೊರತು

(ಬಿ) ಅವನು ಇಪ್ಪತ್ತೈದು ವರ್ಷ ವಯಸ್ಸಿನವನಾಗಿದ್ದ ಹೊರತು;

(ಸಿ) ಒಳ್ಳೆಯ ವರ್ತನೆ ಹಾಗೂ ಹೆಸರು ಹೊಂದಿದ್ದ ಹೊರತು ಹಾಗೂ ಸಂಸ್ಥೆಯು ಇರುವ ಪ್ರದೇಶದಲ್ಲಿ ಗೌರವಕ್ಕೆ ಪಾತ್ರನಾಗಿದ್ದ ಹೊರತು;

(ಡಿ) ಯಾವುದೇ ಧರ್ಮಾದಾಯ ಸಂಸ್ಥೆ ಅಥವಾ ಹಿಂದೂ ಧಾರ್ಮಿಕ ಸಂಸ್ಥೆಯ ನಿರ್ಮಾಣ, ದುರಸ್ತಿ, ಜೀರ್ಣೋದ್ದಾರ ಅಥವಾ ಅಭಿವೃದ್ಧಿಗೆ ಅಥವಾ ಸಂಸ್ಥೆಯಲ್ಲಿ ಯಾವುದೇ ಉತ್ಸವ ನಡೆಸಲು ಅಥವಾ ಧರ್ಮಾದಾಯಕ್ಕಾಗಿ ದಾನ ಅಥವಾ ವಂತಿಗೆ ನೀಡಿದ್ದ ಹೊರತು;

– ಒಂದು ಅಧಿಸೂಚಿತ ಸಂಸ್ಥೆಯ ವ್ಯವಸ್ಥಾಪನಾ ಮಂಡಲಿಯ ಸದಸ್ಯನಾಗಿ ನೇಮಕಗೊಳ್ಳಲು ಅರ್ಹನಾಗತಕ್ಕದ್ದಲ್ಲ.

5) ಯಾವೊಬ್ಬ ವ್ಯಕ್ತಿಯು,–

(i) ಒಂದು ಸಕ್ಷಮ ನ್ಯಾಯಾಲಯದಿಂದ ಅವಿಮುಕ್ತ ದಿವಾಳಿಯೆಂದು ಘೋಷಿತನಾಗಿದ್ದರೆ, ಅಥವಾ

(ii) ಅಸ್ವಸ್ಥ ಚಿತ್ತನಾಗಿದ್ದು ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲಾಗಿದ್ದರೆ ಅಥವಾ ಕಿವುಡ ಅಥವಾ ಮೂಕನಾಗಿದ್ದರೆ ಅಥವಾ ಕುಷ್ಠ ಅಥವಾ ಇತರ ಯಾವುದೇ ಭಯಂಕರ ಅಥವಾ ಸಾಂಕ್ರಾಮಿಕ ಖಾಯಿಲೆಯಿಂದ ಪೀಡಿತನಾಗಿದ್ದರೆ, ಅಥವಾ

(iii) ಸಂಸ್ಥೆಯ ಯಾವುದೇ ಸ್ವತ್ತಿನ ಅಥವಾ ಮಾಡಿಕೊಳ್ಳಲಾದ ಯಾವುದೇ ಕರಾರಿನ ಸಂಬಂಧದಲ್ಲಿ ಈಗಿರುವ ಗುತ್ತಿಗೆಯಲ್ಲಿ ಸಂಸ್ಥೆಗಾಗಿ ಮಾಡಲಾದ ಕಾಮಗಾರಿಯಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷ ಹಿತಾಸಕ್ತಿ ಹೊಂದಿದ್ದರೆ ಅಥವಾ ಸಂಸ್ಥೆಗೆ ತಾನು ಕೊಡಬೇಕಾದ ಯಾವುದೇ ಪ್ರಕಾರದ ಬಾಕಿಯನ್ನು ಕೊಡದೇ ಉಳಿಸಿಕೊಂಡಿದ್ದರೆ; ಅಥವಾ

(iv) ಸಂಸ್ಥೆಯ ಪರವಾಗಿ ಅಥವಾ ವಿರುದ್ಧವಾಗಿ ಕಾನೂನು ವೃತ್ತಿಗಾರನಾಗಿ ಹಾಜರಾಗುತ್ತಿದ್ದರೆ ಅಥವಾ

(v) ನೈತಿಕ ಅಧಃಪತನವನ್ನು ಒಳಗೊಳ್ಳುವ ಒಂದು ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಶಿಕ್ಷಿತನಾಗಿದ್ದು ಮತ್ತು ಅಂಥ ಶಿಕ್ಷೆಯನ್ನು ಹಿಂತೆಗೆದುಕೊಂಡಿದಿದ್ದರೆ; ಅಥವಾ ಅಪರಾಧವನ್ನು ಕ್ಷಮಿಸಿರದಿದ್ದರೆ, ಅಥವಾ

(vi) ಯಾವಾಗಲಾದರೂ ಸಂಸ್ಥೆಯ ಹಿತಾಸಕ್ತಿಗೆ ವಿರುದ್ಧವಾಗಿ ವರ್ತಿಸಿದ್ದರೆ; ಅಥವಾ

(vii) ಅಂಥ ಸಂಸ್ಥೆಯ ಅರ್ಚಕನಾಗಿ ಅಲ್ಲದೆ ಯಾವುದೇ ಪದವನ್ನು ಧಾರಣ ಮಾಡಿದ್ದರೆ ಅಥವಾ ಒಬ್ಬ ನೌಕರನಾಗಿದ್ದರೆ ಅಥವಾ ಅಂಥ ಸಂಸ್ಥೆಯಿಂದ ಯಾವುದೇ ವೇತನ ಅಥವಾ ಅನುಷಂಗಿಕ ಲಾಭವನ್ನು ಸ್ವೀಕರಿಸುವ ವ್ಯಕ್ತಿಯಾಗಿದ್ದರೆ; ಅಥವಾ

(viii) ಮಧ್ಯಪಾನ ಅಥವಾ ಮಾದಕದ್ರವ್ಯ ಸೇವನೆಯ ದುರ್ವ್ಯಸನಿಯಾಗಿದ್ದರೆ; ಅಥವಾ

(ix) ಹಿಂದೂ ಅಲ್ಲದಿದ್ದರೆ; ಅಥವಾ ಹಿಂದೂ ಆಗಿದ್ದು ತರುವಾಯದಲ್ಲಿ ಯಾವುದೇ ಇತರ ಧರ್ಮಕ್ಕೆ ಪರಿವರ್ತಿತನಾಗಿದ್ದರೆ.

– ಅವನು ಯಾವುದೇ ಅಧಿಸೂಚಿತ ಸಂಸ್ಥೆಯ ವ್ಯವಸ್ಥಾಪನಾ ಸಮಿತಿಯ ಸದಸ್ಯನಾಗಿ ನೇಮಕಗೊಳ್ಳಲು ಅಥವಾ ಮುಂದುವರಿಯಲು ಅನರ್ಹನಾಗಿರತಕ್ಕದ್ದು.

6) ಸಮಿತಿಯ ಒಬ್ಬ ಸದಸ್ಯನು (5)ನೇ ಉಪ-ಪ್ರಕರಣದ ಅಡಿಯಲ್ಲಿ ಯಾವುದೇ ಅನರ್ಹತೆಗೆ ಒಳಗಾದರೆ ಅಥವಾ ಅನರ್ಹನಾದರೆ ಅವನು ಅಂಥ ಸದಸ್ಯನಾಗಿರುವುದು ಸಹಜವಾಗಿಯೇ ನಿಂತು ಹೋಗತಕ್ಕದ್ದು.

7) ಯಾವೊಬ್ಬ ಸದಸ್ಯನು (5)ನೇ ಉಪ-ಪ್ರಕರಣದ ಅಡಿಯಲ್ಲಿ ಯಾವುದೇ ಅನರ್ಹತೆಗೆ ಒಳಗಾದ ಬಗ್ಗೆ ಅಥವಾ ಅನರ್ಹನಾದ ಬಗ್ಗೆ ಯಾವುದೇ ಪ್ರಶ್ನೆ ಉದ್ಭವಿಸಿದರೆ, ನಿಯಮಿಸಲಾದ ಪ್ರಾಧಿಕಾರವು ಸಂಬಂಧಪಟ್ಟ ವ್ಯಕ್ತಿಗೆ ಅಹವಾಲು ಹೇಳಿಕೊಳ್ಳಲು ಅವಕಾಶಕೊಟ್ಟ ತರುವಾಯ ತಾನಾಗಿಯೇ ಅಥವಾ ತನಗೆ ಬಂದ ವರದಿಯ ಮೇರೆಗೆ ಆ ಪ್ರಶ್ನೆಯನ್ನು ತೀರ್ಮಾನಿಸಬಹುದು.

**26. ವ್ಯವಸ್ಥಾಪನಾ ಸಮಿತಿಯ ಪದಾವಧಿ ಹಾಗೂ ಅಧ್ಯಕ್ಷನ ಚುನಾವಣೆ.**– (1) ನಿಯಮಿಸಲಾದ ಪ್ರಾಧಿಕಾರದ ಇಚ್ಛೆಗೆ ಒಳಪಟ್ಟು ಸದಸ್ಯರು, ಮೂರು ವರ್ಷಗಳ ಅವಧಿಯವರೆಗೆ ಆ ಅವಧಿಯಲ್ಲಿ ಸಮಿತಿಯು ವಿಘಟಿತವಾಗದಿದ್ದರೆ ಅಥವಾ ಕಾರ್ಯನಿರ್ವಹಿಸುವುದು ನಿಂತು ಹೋಗದಿದ್ದರೆ, ಪದಧಾರಣ ಮಾಡತಕ್ಕದ್ದು.

2) 25ನೇ ಪ್ರಕರಣದ ಅಡಿಯಲ್ಲಿ ವ್ಯವಸ್ಥಾಪನಾ ಸಮಿತಿಯು ರಚಿತವಾಗಿದ್ದಲ್ಲಿ, ನಿಯಮಿಸಲಾದ ಪ್ರಾಧಿಕಾರವು ಸದಸ್ಯರ ಪೈಕಿಯಿಂದ ಒಬ್ಬನನ್ನು ಅಧ್ಯಕ್ಷನನ್ನಾಗಿ ಚುನಾಯಿಸತಕ್ಕದ್ದು.

3) ರಾಜ್ಯ ಸರ್ಕಾರವು, ಕಾರ್ಯನಿರ್ವಹಣಾಧಿಕಾರಿಯನ್ನು ಯಾವುದೇ ಅಧಿಸೂಚಿತ ಸಂಸ್ಥೆ ಅಥವಾ ಸಂಸ್ಥೆಗಳ ಸಂಬಂಧದಲ್ಲಿ ವ್ಯವಸ್ಥಾಪನಾ ಸಮಿತಿಗೆ ಸಂಬಂಧಿಸಿದಂತೆ ಮತದಾನದ ಹಕ್ಕು ಹೊಂದಿರದ ಪದನಿಮಿತ್ತ ಸದಸ್ಯ ಕಾರ್ಯದರ್ಶಿಯನ್ನಾಗಿ ನಾಮನಿರ್ದೇಶಿಸಬಹುದು.

4) ಮೇಲ್ಕಾಣಿಸಿದ (1), (2) ಮತ್ತು (3)ನೇ ಉಪ ಪ್ರಕರಣಗಳಲ್ಲಿರುವುದಕ್ಕೆ ವಿರುದ್ಧವಾದುದು ಏನೇ ಇದ್ದರೂ, ಯಾವುದೇ ಧರ್ಮಾದಾಯ ಸಂಸ್ಥೆ ಅಥವಾ ಹಿಂದೂ ಧಾರ್ಮಿಕ ಸಂಸ್ಥೆಯನ್ನು, ಅದು 23ನೇ ಪ್ರಕರಣದ ಅಡಿಯಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರುವ ನಿಕಟಪೂರ್ವದಲ್ಲಿ ಅಂಥ ಸಂಸ್ಥೆಯ ಸಂಸ್ಥಾಪಕ ಅಥವಾ ಅವನ ಕುಟುಂಬದ ಯಾವೊಬ್ಬ ವ್ಯಕ್ತಿ ನಿರ್ವಹಿಸುತ್ತಿದ್ದರೆ, ಅಂಥ ಸಂಸ್ಥಾಪಕ ಮತ್ತು

ಆತನಿಲ್ಲದಿದ್ದರೆ ಅವನ ಕುಟುಂಬ ಯಾವೊಬ್ಬ ಸದಸ್ಯನನ್ನು ಅವನನ್ನು 25ನೇ ಪ್ರಕರಣದ ಅಡಿ ಅನ್ಯಥಾ ಅನರ್ಹಗೊಳಿಸಿದ್ದ ಹೊರತು ಅಂಥ ಅಧಿಸೂಚಿತ ಸಂಸ್ಥೆಯ ವ್ಯವಸ್ಥಾಪನಾ ಸಮಿತಿಯ ಅಧ್ಯಕ್ಷನನ್ನಾಗಿ ನಾಮನಿರ್ದೇಶಿಸತಕ್ಕದ್ದು.

**Xx xx xx**

**28. ವ್ಯವಸ್ಥಾಪನಾ ಸಮಿತಿಯನ್ನು ವಿಘಟಿಸಲು ಅಧಿಕಾರ.**- (1) ನಿಯಮಿಸಲಾದ ಪ್ರಾಧಿಕಾರಕ್ಕೆ, (2)ನೇ ಉಪ-ಪ್ರಕರಣಕ್ಕನುಸಾರವಾಗಿ ವಿಚಾರಣೆ ನಡೆಸಿದ ತರುವಾಯ, ಸಮಿತಿಯು,

(ಎ) ಈ ಅಧಿನಿಯಮದ ಉಪಬಂಧಗಳು ಅಥವಾ ಅದರಡಿಯಲ್ಲಿ ಮಾಡಿದ ನಿಯಮಗಳಿಗನುಸಾರವಾಗಿ ಕರ್ತವ್ಯಗಳನ್ನು ನಿರ್ವಹಿಸಲು ಅಥವಾ ಪ್ರಕಾರ್ಯಗಳನ್ನು ನೆರವೇರಿಸಲು ವಿಫಲವಾಗಿದೆ ಎಂದು; ಅಥವಾ

(ಬಿ) ರಾಜ್ಯ ಸರ್ಕಾರ ಅಥವಾ ಆಯುಕ್ತ, ಉಪ ಆಯುಕ್ತ ಅಥವಾ ಸಹಾಯಕ ಆಯುಕ್ತನು ಈ ಅಧಿನಿಯಮದ ಉಪಬಂಧಗಳು ಅಥವಾ ಅದರಡಿಯಲ್ಲಿ ಮಾಡಿದ ನಿಯಮಗಳ ಅಡಿಯಲ್ಲಿ ಹೊರಡಿಸಿದ ಯಾವುವೇ ಕಾನೂನು ಸಮ್ಮತ ಆದೇಶಗಳನ್ನು ಪಾಲಿಸಿಲ್ಲವೆಂದು; ಅಥವಾ

(ಸಿ) ಸಂಸ್ಥೆಯ ಅಥವಾ ದತ್ತಿಯ ಸ್ವತ್ತುಗಳ ಸಂಬಂಧದಲ್ಲಿ ಯಾವುದೇ ದುಷ್ಕೃತ್ಯ ಅಥವಾ ಅನ್ಯಾಯವೆಸಗಿದೆ ಎಂದು ಅಥವಾ ವಿಶ್ವಾಸದ್ರೋಹ ಅಥವಾ ದುರ್ವಿನಿಯೋಗದ ದೋಷಿಯೆಂದು,

- ಮನದಟ್ಟಾದರೆ, ಅದು ಸಮಿತಿಯನ್ನು ವಿಘಟಿಸಲು ಅಧಿಕಾರ ಹೊಂದಿರತಕ್ಕದ್ದು.

2) ನಿಯಮಿಸಲಾದ ಪ್ರಾಧಿಕಾರವು (1)ನೇ ಉಪ ಪ್ರಕರಣದ ಅಡಿಯಲ್ಲಿ ಕ್ರಮ ಕೈಗೊಳ್ಳಲು ಉದ್ದೇಶಿಸಿದರೆ ಅಧ್ಯಕ್ಷನ ವಿರುದ್ಧ ಆರೋಪವನ್ನು ಸಿದ್ಧಪಡಿಸತಕ್ಕದ್ದು ಮತ್ತು ಅಂಥ ಆರೋಪಗಳಿಗೆ ಉತ್ತರ ನೀಡಲು ಅಥವಾ ತನ್ನ ವಿರುದ್ಧ ಒದಗಿಸಲಾದ ಸಾಕ್ಷ್ಯವನ್ನು ಪರೀಕ್ಷಿಸಲು ಮತ್ತು ಸಮಿತಿಯ ಪರವಾಗಿ ಸಾಕ್ಷ್ಯವನ್ನು ಒದಗಿಸಲು ಅವನಿಗೆ ಅವಕಾಶ ನೀಡತಕ್ಕದ್ದು; ವಿಘಟನೆಯ ಆದೇಶದಲ್ಲಿ ಸಮಿತಿಯ ವಿರುದ್ಧ ಮಾಡಲಾದ ಪ್ರತಿಯೊಂದು ಆರೋಪ, ಸಮಿತಿಯು ನೀಡಿದ ವಿವರಣೆ ಹಾಗೂ ಅಂಥ ಆರೋಪದ ಕುರಿತ ಅಭಿಪ್ರಾಯ ಕಾರಣ ಸಹಿತವಾಗಿ ಇರತಕ್ಕದ್ದು.

3) ನಿಯಮಿಸಲಾದ ಪ್ರಾಧಿಕಾರವು (2)ನೇ ಉಪ-ಪ್ರಕರಣದ ಅಡಿಯಲ್ಲಿನ ವಿಚಾರಣೆ ಬಾಕಿ ಇರುವಾಗ ಸಮಿತಿಯನ್ನು ಅಮಾನತ್ತಿನಲ್ಲಿರಿಸಿ 29ನೇ ಪ್ರಕರಣಕ್ಕನುಸಾರವಾಗಿ ಒಬ್ಬ ಆಡಳಿತಗಾರನನ್ನು ನೇಮಿಸಬಹುದು.

4) ಈ ಪ್ರಕರಣದ ಅಡಿಯಲ್ಲಿನ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು ಆದೇಶ ತಲುಪಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ,-

ಎ) ಆ ಆದೇಶವನ್ನು ಆಯುಕ್ತನು ಮಾಡಿದ್ದರೆ, ಕರ್ನಾಟಕ ಅಪೀಲು ನ್ಯಾಯಾಧಿಕರಣ ಅಧಿನಿಯಮ, 1976 (1976ರ ಕರ್ನಾಟಕ ಅಧಿನಿಯಮ 10)ರ ಅಡಿಯಲ್ಲಿ ರಚಿತವಾದ ಕರ್ನಾಟಕ ಅಪೀಲು ವಿಚಾರಣಾ ನ್ಯಾಯಾಧಿಕರಣಕ್ಕೆ,

ಬಿ) ಆದೇಶವನ್ನು ಉಪ ಆಯುಕ್ತನು ಮಾಡಿದ್ದರೆ, ಆಯುಕ್ತನಿಗೆ

ಸಿ) ಆದೇಶವನ್ನು ಸಹಾಯಕ ಆಯುಕ್ತನು ಮಾಡಿದ್ದರೆ, ಉಪ ಆಯುಕ್ತನಿಗೆ ಅಪೀಲು ಸಲ್ಲಿಸಬಹುದು.

5) ಅಪೀಲು ವಿಚಾರಣಾ ಪ್ರಾಧಿಕಾರವು ವಿಚಾರಣೆ ನಡೆಸಿದ ತರುವಾಯ ತಾನು ಯುಕ್ತವೆಂದು ಭಾವಿಸಬಹುದಾದ ಅಂಥ ಆದೇಶವನ್ನು ಮಾಡತಕ್ಕದ್ದು ಮತ್ತು ಅಂಥ ಆದೇಶವು ಅಂತಿಮವಾಗಿರತಕ್ಕದ್ದು.

**29. ಆಡಳಿತಗಾರನ ನೇಮಕಾತಿ.**- ನಿಯಮಿಸಲಾದ ಪ್ರಾಧಿಕಾರವು 28ನೇ ಪ್ರಕರಣದ (1) ಅಥವಾ (3)ನೇ ಉಪ ಪ್ರಕರಣದ ಅಡಿಯಲ್ಲಿ ವಿಘಟಿಸಲಾದ ಅಥವಾ ಅಮಾನತ್ತುಗೊಳಿಸಲಾದ ವ್ಯವಸ್ಥಾಪನಾ ಸಮಿತಿಯ ಬದಲಾಗಿ ಅಥವಾ 26ನೇ ಪ್ರಕರಣದ ಅಡಿಯಲ್ಲಿ ಸಮಿತಿಯ ಪದಾವಧಿ ಮುಕ್ತಾಯವಾದ ತರುವಾಯ ಮತ್ತು ಹೊಸ ವ್ಯವಸ್ಥಾಪನಾ ಸಮಿತಿ ರಚಿತವಾಗುವವರೆಗೆ ಅಥವಾ ಆರು ತಿಂಗಳ ಅವಧಿಯವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರಾಜ್ಯ ಸರ್ಕಾರದ ಒಬ್ಬ ಅಧಿಕಾರಿಯನ್ನು ಆಡಳಿತಗಾರನನ್ನಾಗಿ ನೇಮಿಸತಕ್ಕದ್ದು.

**30. ಸಾಂದರ್ಭಿಕ ರಿಕ್ತಸ್ಥಾನಗಳನ್ನು ಭರ್ತಿ ಮಾಡುವುದು.**- ಒಂದು ಅಧಿಸೂಚಿತ ಸಂಸ್ಥೆಯ ವ್ಯವಸ್ಥಾಪನಾ ಸಮಿತಿಯ ಒಬ್ಬ ಸದಸ್ಯನನ್ನು ತೆಗೆದುಹಾಕುವುದರಿಂದ ಅಥವಾ ಆತನ ರಾಜೀನಾಮೆಯಿಂದ ಅಥವಾ ಅನ್ಯಥಾ ರಿಕ್ತತೆ ಉಂಟಾದರೆ, ನಿಯಮಿಸಲಾದ ಪ್ರಾಧಿಕಾರವು 25ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಸಮಿತಿಗೆ ಹೊಸ ಸದಸ್ಯರನ್ನು ನೇಮಿಸುವ ಮೂಲಕ ರಿಕ್ತಸ್ಥಾನವನ್ನು ತುಂಬತಕ್ಕದ್ದು. ಹಾಗೆ ನೇಮಕಗೊಂಡ ಅಂಥ ಸಮಿತಿಯ ಸದಸ್ಯನು, ಯಾವ ಸದಸ್ಯನ ಸ್ಥಾನಕ್ಕೆ ಆತನು ನೇಮಕಗೊಂಡಿದ್ದಾನೋ ಆ ರಿಕ್ತಸ್ಥಾನ ಉಂಟಾಗಿರದಿದ್ದರೆ ಆ ಸದಸ್ಯನು ಪದದಲ್ಲಿರಲು ಹಕ್ಕುಳ್ಳವನಾಗಿರುತ್ತಿದ್ದ ಅವಧಿಯವರೆಗೆ ಪದಧಾರಣಮಾಡತಕ್ಕದ್ದು.

**31. ಅಧಿಸೂಚಿತ ಸಂಸ್ಥೆಗಳಿಗೆ ನೀಡಲಾದ ಭೂಮಿಗಳು ಅಥವಾ ಇತರ ಸ್ವತ್ತಿನ ಪರಭಾರೆ ಅಥವಾ ವರ್ಗಾವಣೆ, ಪ್ರಾಧಿಕೃತವಾಗಿದ್ದ ಹೊರತು ಅನೂರ್ಜಿತವಾಗುವುದು.**- (1) ಮಾರಾಟ, ಗುತ್ತಿಗೆ, ದಾನ, ಅಡಮಾನದ ಮೂಲಕ ಅಥವಾ ಅನ್ಯಥಾ ಒಂದು ಅಧಿಸೂಚಿತ ಸಂಸ್ಥೆಗೆ ನೀಡಿದ ಅಥವಾ ಸೇರಿದ ಯಾವುದೇ ಭೂಮಿ ಅಥವಾ ಇತರ ಸ್ಥಿರಸ್ವತ್ತಿನ ಯಾವುದೇ ಪರಭಾರೆ ಅಥವಾ ವರ್ಗಾವಣೆ ಮತ್ತು ಅಂಥ ಭೂಮಿ ಅಥವಾ ಸ್ವತ್ತಿನ ಸಂಬಂಧದಲ್ಲಿ ಅಂಥ ಸಂಸ್ಥೆಗೆ ಪ್ರತಿಕೂಲವಾದ ಯಾವುದೇ ಹಿತಾಸಕ್ತಿಯನ್ನು ಸೃಜಿಸುವುದೆಂದು ತಾತ್ಪರ್ಯವಾಗುವ ಯಾವುದೇ ಕೃತ್ಯವು, ಅಂಥ ಪರಭಾರೆ ಅಥವಾ ವರ್ಗಾವಣೆ ಅಥವಾ ಯಾವುದೇ ಕೃತ್ಯವನ್ನು ಸಂಸ್ಥೆಯ ಅತ್ಯುತ್ತಮ ಹಿತಾಸಕ್ತಿಗಾಗಿ ಮಾಡಿದ್ದ ಹೊರತು ಮತ್ತು 62ನೇ ಪ್ರಕರಣದ ಅಡಿಯಲ್ಲಿ ಮಂಜೂರಾಗಿದ್ದ ಹೊರತು ಅಕೃತವಾಗತಕ್ಕದ್ದು ಮತ್ತು ಶೂನ್ಯವಾಗತಕ್ಕದ್ದು.

2) ಆಯುಕ್ತರ ವರದಿಯ ಮೇರೆಗೆ, ರಾಜ್ಯ ಸರ್ಕಾರವು ನೀಡಿರುವ ಅನುಮತಿಯ ಹೊರತಾಗಿ ಯಾವುದೇ ರೀತಿಯಲ್ಲೂ ಯಾವುವೇ ಚಿನ್ನ ಅಥವಾ ಬೆಳ್ಳಿ ಅಥವಾ ಬೆಳ್ಳಿಯಂತೆ ಕಾಣುವ ಮಿಶ್ರಲೋಹದ ಸಾಮಗ್ರಿಗಳು, ಮೂರ್ತಿಗಳು, ಪಾತ್ರೆಗಳು, ಅಮೂಲ್ಯ ಹರಳುಗಳು, ಪ್ರಾಚ್ಯ ಮಹತ್ವದ ಸಾಮಗ್ರಿಗಳು ವರ್ಣಚಿತ್ರಗಳು ಮತ್ತು ಶಿಲೆ, ಲೋಹ ಮತ್ತು ತಾಳೆಗರಿಗಳ, ಶಾಸನಗಳಿರುವ ಪ್ರಾಚೀನ ದಾಖಲೆಗಳನ್ನು ಮತ್ತು ಅಂಥ ಇತರ ಚಿರಸ್ವತ್ತುಗಳನ್ನು ಯಾವುದೇ ರೀತಿಯಲ್ಲಿ ವಿಲೆ ಮಾಡತಕ್ಕದ್ದಲ್ಲ.

**Xx xx xx**

**33. ಅಧಿಸೂಚಿತ ಸಂಸ್ಥೆಗಳ ಪರವಾಗಿ ದಾವೆಗಳು.**- (1) ಯಾವುದೇ ಅಧಿಸೂಚಿತ ಸಂಸ್ಥೆಯ ಪರವಾಗಿ ದಾವೆ ಹೂಡುವ ಅಗತ್ಯವಿರುವಲ್ಲಿ ಉಪ ಆಯುಕ್ತ ಅಥವಾ ಸಹಾಯಕ ಆಯುಕ್ತನು ವ್ಯವಸ್ಥಾಪನಾ ಸಮಿತಿಯ ಶಿಫಾರಸ್ಸಿನ ಮೇರೆಗೆ ತಾನೇ ದಾವೆ ಹೂಡಬಹುದು.

2) ಅಧಿಸೂಚಿತ ಸಂಸ್ಥೆಯ ಪರವಾಗಿ ಹೂಡಲಾದ ಪ್ರತಿಯೊಂದು ದಾವೆಯನ್ನು ನ್ಯಾಯಾಲಯವು, ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ XXXIನೇ ಕ್ರಮಾದೇಶದ ಅಡಿಯಲ್ಲಿ ಹೂಡಲಾದುದೆಂಬಂತೆ ವಿಚಾರಣೆ ನಡೆಸಿ ಇತ್ಯರ್ಥಗೊಳಿಸತಕ್ಕದ್ದು.

**Xx xx xx**

**35. ಅಧ್ಯಾಯದ ಅನ್ವಯ.**- ಈ ಅಧ್ಯಾಯದಲ್ಲಿರುವುದು ಯಾವುದೂ, ಒಟ್ಟು ವಾರ್ಷಿಕ ಆದಾಯವು ಇಪ್ಪತ್ತೈದು ಸಾವಿರ ರೂಪಾಯಿಗಳಿಗೆ ಮೀರದ ಅಧಿಸೂಚಿತ ಸಂಸ್ಥೆಗೆ ಅನ್ವಯಿಸತಕ್ಕದ್ದಲ್ಲ.

**36. ಅಧಿಸೂಚಿತ ಸಂಸ್ಥೆಗಳ ಬಜೆಟ್.**- (1) ಒಂದು ಅಧಿಸೂಚಿತ ಸಂಸ್ಥೆಯ ಅಧ್ಯಕ್ಷ, ವ್ಯವಸ್ಥಾಪಕ ಅಥವಾ ಕಾರ್ಯನಿರ್ವಾಹಣಾಧಿಕಾರಿಯು ಪ್ರತಿಯೊಂದು ಹಣಕಾಸು ವರ್ಷವು ಮುಕ್ತಾಯವಾಗುವುದಕ್ಕೆ ಮುಂಚೆ ತೊಂಬತ್ತು ದಿನಗಳೊಳಗಾಗಿ ನಿಯಮಿಸಬಹುದಾದ ಅಂಥ ನಮೂನೆಯಲ್ಲಿ, ಹಿಂದಿನ ವರ್ಷದ ವಾಸ್ತವಿಕ ವರಮಾನ ಹಾಗೂ ವೆಚ್ಚದೊಂದಿಗೆ ಮುಂದಿನ ವರ್ಷದಲ್ಲಿ ಅಂಥ ಸಂಸ್ಥೆಯ ಸಂಭವನೀಯ ಸ್ವೀಕೃತಿಗಳು ಮತ್ತು ಬಟವಾಡೆಗಳ ಬಜೆಟನ್ನು ಸಂಸ್ಥೆಯ ಪ್ರಭಾರದಲ್ಲಿರುವ ಸಹಾಯಕ ಆಯುಕ್ತನಿಗೆ ಸಲ್ಲಿಸತಕ್ಕದ್ದು. ಸ್ವೀಕೃತಿಗಳ ಭಾಗದಲ್ಲಿ, ಹುಂಡಿ ಸಂಗ್ರಹಣೆ, ತಸ್ದೀಕ್ ಮೊತ್ತ, ವರ್ಷಾಶನ, ನಗದು ಅನುದಾನಗಳು, ಜಾತ್ರೆ, ರಥೋತ್ಸವ, ಸೇವಾರ್ಥ ಶುಲ್ಕಗಳು, ಠೇವಣಿ ಮೇಲಣ ಬಡ್ಡಿ, ಮನಿಯಾರ್ಡರುಗಳು, ಜಮೀನು ಮತ್ತು ಕಟ್ಟಡಗಳ ಬಾಡಿಗೆ ಇವುಗಳಿಂದ ಬರಬಹುದಾದ ವರಮಾನ ಮತ್ತು ನಿಯಮಿಸಬಹುದಾದ ಅಂಥ ಇತರ ವರಮಾನವು ಸೇರಿರತಕ್ಕದ್ದು;

ಪರಂತು, ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದ ಅಧಿಸೂಚಿತ ಅಂಥ ಸಂಸ್ಥೆಗಳ ವರ್ಗ ಅಥವಾ ವರ್ಗಗಳ ಸಂಬಂಧದಲ್ಲಿ ಪ್ರತಿಯೊಂದು ವರ್ಷವು ಮುಕ್ತಾಯವಾಗುವುದಕ್ಕೆ ಮುಂಚೆ ವಾರ್ಷಿಕ ಬಜೆಟನ್ನು ಸಲ್ಲಿಸುವುದು ಅಗತ್ಯವಾಗಿರತಕ್ಕದ್ದಲ್ಲ. ಆದರೆ ಪ್ರತಿ ಮೂರು ವರ್ಷಗಳಿಗೊಂದು ಬಾರಿ ಸಲ್ಲಿಸಿದರೆ ಸಾಕು.

2) (1)ನೇ ಉಪ-ಪ್ರಕರಣದ ಅಡಿಯಲ್ಲಿ ಸಲ್ಲಿಸಲಾದ ಪ್ರತಿಯೊಂದು ಬಜೆಟ್ಟಿನಲ್ಲಿ ಈ ಮುಂದಿನವುಗಳಿಗೆ ಸಾಕಷ್ಟು ಹಣದ ಏರ್ಪಾಟು ಮಾಡತಕ್ಕದ್ದು, ಎಂದರೆ,-

(i) ಸಂಸ್ಥೆಯ ಅಥವಾ ದತ್ತಿಯ ಧ್ಯೇಯೋದ್ದೇಶಗಳ ಮತ್ತು ಅಲ್ಲಿನ ಸೇವೆಗಳ ಸೂಕ್ತ ನಿರ್ವಹಣೆಗೆ ಹಾಗೂ ಅನುಸೂಚಿತ ದಿತ್ತಂ ಸಾಮಗ್ರಿಗಳು ಮತ್ತು ಪೂಜೆ ಮತ್ತು ಹರಕೆಗಳಿಗೆ ಅಗತ್ಯವಾಗುವ ಇತರ ವಸ್ತುಗಳಿಗೆ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಪ್ರಮಾಣದ ಅವುಗಳ ವೆಚ್ಚವೂ ಸೇರಿದಂತೆ ಅಂಥ ಸೇವೆಗಳಿಗೆ ಸಂಬಂಧಿಸಿದ ಸಂಭಾವನೆ.

ಪರಂತು, ಅರ್ಚಕರ ಮತ್ತು ದೇವಸ್ಥಾನ ನೌಕರರ ವೇತನಗಳು, ಅದರ ಒಟ್ಟು ವಾರ್ಷಿಕ ವರಮಾನದ ಶೇಕಡಾ ಮೂವತ್ತೈದರಷ್ಟನ್ನು ಮೀರತಕ್ಕದ್ದಲ್ಲ.

ಮತ್ತು ಪರಂತು, ಮಂಜೂರಾದ ಅಂಥ ಹುದ್ದೆಗಳಿಗೆ ಮಾತ್ರ ಮತ್ತು ನಿಯಮಿಸಬಹುದಾದಂಥ ಅಂಥ ಮೊತ್ತದ ವೇತನಕ್ಕೆ ಮಾತ್ರ ಬಜೆಟ್ಟಿನಲ್ಲಿ ಹಣದ ಏರ್ಪಾಟು ಮಾಡತಕ್ಕದ್ದು.

**ವಿವರಣೆ.**- ಈ ಅಧ್ಯಾಯದ ಅಡಿಯಲ್ಲಿ ಒಟ್ಟು ವಾರ್ಷಿಕ ವರಮಾನವು,

(ಎ) ಬಂಡವಾಳಕ್ಕೆ ವಂತಿಗೆ ಎಂಬಂತೆ ನೀಡಲಾದ ಕೊಡುಗೆಗಳು;

(ಬಿ) ಸಂಸ್ಥೆಗೆ ಸೇರಿದ ಒಡವೆಗಳು ಅಥವಾ ಇತರ ಚರ ಅಥವಾ ಸ್ಥಿರ ಸ್ವತ್ತುಗಳ ಮಾರಾಟದಿಂದ ಬಂದ ಮೊತ್ತ;

(ಸಿ) ಸೇವೆ ಅಥವಾ ಧರ್ಮಕಾರ್ಯವನ್ನು ನೆರವೇರಿಸಿದಾಗ ನಿರ್ದಿಷ್ಟ ಸೇವೆಗಳು ಅಥವಾ ಧರ್ಮಕಾರ್ಯಗಳಿಗಾಗಿ ಸ್ವೀಕರಿಸಿದ ಮೊತ್ತ;

- ಇವುಗಳನ್ನು ಒಳಗೊಳ್ಳತಕ್ಕದ್ದಲ್ಲ.

(i) ಸಂಸ್ಥೆಯನ್ನು ಬದ್ಧಗೊಳಿಸುವ ಎಲ್ಲ ಹೊಣೆಗಾರಿಕೆಗಳು ಹಾಗೂ ಜವಾಬ್ದಾರಿಗಳ ಸೂಕ್ತ ನಿರ್ವಹಣೆ;

(ii) ಸಂಸ್ಥೆಯಲ್ಲಿ ತಂಗಲು ಬರುವ ಯಾತ್ರಿಕರು, ಆರಾಧಕರು, ಅಥವಾ ಇತರ ವ್ಯಕ್ತಿಗಳ ಆರೋಗ್ಯ ಸಂರಕ್ಷಣೆ, ಸುಭದ್ರತೆ ಅಥವಾ ಅನುಕೂಲಕ್ಕಾಗಿ ಮಾಡಲಾಗುವ ವ್ಯವಸ್ಥೆ;

(ii) ಸಂಸ್ಥೆ ಹಾಗೂ ಅದಕ್ಕೆ ಸಂಬಂಧಿಸಿದ ಕಟ್ಟಡಗಳ ನಿರ್ಮಾಣ, ದುರಸ್ತಿ, ವಾರ್ಷಿಕ ನಿರ್ವಹಣೆ, ಜೀರ್ಣೋದ್ಧಾರ ಹಾಗೂ ಸುಧಾರಣೆ.

ಪರಂತು, ನಿಯಮಿಸಬಹುದಾದ ಅಂಥ ಪ್ರಾಧಿಕಾರದಿಂದ ಅಂಥ ಕಾಮಗಾರಿಗೆ ಆಡಳಿತಾತ್ಮಕ ಹಾಗೂ ತಾಂತ್ರಿಕ ಮಂಜೂರಾತಿ ಪಡೆಯದೇ ಅದನ್ನು ಕೈಗೊಳ್ಳತಕ್ಕದ್ದಲ್ಲ.

(iv) ಒಟ್ಟು ವಾರ್ಷಿಕ ವರಮಾನದ ನಿಯಮಿಸಬಹುದಾದ ಅಂಥ ಶೇಕಡಾ ಪ್ರಮಾಣದ ಲೆಕ್ಕ ಪರಿಶೋಧನಾ ಶುಲ್ಕ;

(v) ಒಟ್ಟು ವಾರ್ಷಿಕ ವರಮಾನದ ಶೇಕಡ ಹತ್ತರಷ್ಟಕ್ಕೆ ಕಡಿಮೆಯಿಲ್ಲದ ಸಂಸ್ಥೆಯ ಮೀಸಲು ನಿಧಿ.

3) ಯಾವ ಅಧಿಸೂಚಿತ ಸಂಸ್ಥೆಯ ವಾರ್ಷಿಕ ವರಮಾನವು ನಿಯಮಿಸಲಾದ ಮೊಬಲಗಿಗಿಂತ ಹೆಚ್ಚಾಗಿರುವುದೋ ಆ ಸಂಸ್ಥೆಯ ಸಂಬಂಧದಲ್ಲಿ, ಅದು (2)ನೇ ಉಪ-ಪ್ರಕರಣದ (೦) ರಿಂದ (ಡ)ನೇ ಬಾಬಿನವರೆಗೆ ಹಣದ ಏರ್ಪಾಟು ಮಾಡಿದ ತರುವಾಯ, ಆರ್ಥಿಕ ವರ್ಷದ ವರಮಾನದ ಉಳಿಕೆಯ ಶೇಕಡ ಐದರಷ್ಟನ್ನು ಸಾಮಾನ್ಯ ಸಂಗ್ರಹಣ ನಿಧಿಗೆ ಸಂದಾಯ ಮಾಡುವುದಕ್ಕಾಗಿ ಬಜೆಟ್ಟಿನಲ್ಲಿ ಹಣದ ಏರ್ಪಾಟು ಮಾಡತಕ್ಕದ್ದು;

4) ಬಜೆಟ್ಟು

(i) ವಾರ್ಷಿಕ ವರಮಾನವು ಒಂದು ಲಕ್ಷ ರೂಪಾಯಿಗಳಿಗೆ ಮೀರದ ಸಂಸ್ಥೆಗೆ ಸಂಬಂಧಪಟ್ಟಿದ್ದರೆ, ಸಹಾಯಕ ಆಯುಕ್ತನಿಗೆ;

(ii) ವಾರ್ಷಿಕ ವರಮಾನವು ಒಂದು ಲಕ್ಷ ರೂಪಾಯಿಗಳಿಗೆ ಮೀರಿದ್ದು ಆದರೆ ಹತ್ತು ಲಕ್ಷ ರೂಪಾಯಿಗಳಿಗೆ ಮೀರದ ಸಂಸ್ಥೆಗೆ ಸಂಬಂಧಪಟ್ಟಿದ್ದರೆ, ಅದರ ಒಂದು ಪ್ರತಿಯನ್ನು ಸಹಾಯಕ ಆಯುಕ್ತನಿಗೆ ನೀಡಿ, ಅದನ್ನು ಉಪ ಆಯುಕ್ತನಿಗೆ, ಮತ್ತು

(iii) ವಾರ್ಷಿಕ ವರಮಾನವು ಹತ್ತು ಲಕ್ಷ ರೂಪಾಯಿಗಳಿಗೆ ಮೀರಿದ ಸಂಸ್ಥೆಗೆ ಸಂಬಂಧಪಟ್ಟಿದ್ದರೆ, ಅದರ ಒಂದು ಪ್ರತಿಯನ್ನು ಉಪ ಆಯುಕ್ತನಿಗೆ ನೀಡಿ, ಅದನ್ನು ಆಯುಕ್ತನಿಗೆ

– ಸಲ್ಲಿಸತಕ್ಕದ್ದು.

5) ಯಾವ ಪ್ರಾಧಿಕಾರಿಗೆ ಬಜೆಟ್ಟನ್ನು ಸಲ್ಲಿಸಲಾಗಿದೆಯೋ ಅವನು ಸಾಧ್ಯವಾದಷ್ಟು ಮಟ್ಟಿಗೆ ಪ್ರಸ್ತಾವವನ್ನು ಸ್ವೀಕರಿಸಿದ ಅರವತ್ತು ದಿನಗಳೊಳಗೆ, ಅದನ್ನು ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು ಮತ್ತು (6)ನೇ ಉಪ-ಪ್ರಕರಣದ ಅಡಿಯಲ್ಲಿ ನಿಕಟ ನಿಯಂತ್ರಣದ ಪ್ರಾಧಿಕಾರಿಯು ಯಾವುದೇ ಷರಾಗಳನ್ನು ಮಾಡಿದ್ದರೆ ಅವುಗಳನ್ನು ಪರಿಗಣಿಸಿದ ತರುವಾಯ, ಬಜೆಟ್ಟನ್ನು ಮಂಜೂರ್ಮಾಡುವ ಅಥವಾ ತಾನು ಸೂಕ್ತವೆಂದು ಭಾವಿಸುವಂಥ ಯಾವುದೇ ಬದಲಾವಣೆ, ಬಿಟ್ಟುಬಿಡುವಿಕೆ ಅಥವಾ ಸೇರ್ಪಡೆಗಳ ಸಹಿತ ಅಥವಾ ಹೊರತಾಗಿ ಆದೇಶಗಳನ್ನು ಹೊರಡಿಸತಕ್ಕದ್ದು.

6) ಯಾರಿಗೆ ಬಜೆಟ್ಟಿನ ಪ್ರತಿಯನ್ನು ಕಳುಹಿಸಲಾಗಿದೆಯೋ ಅಂಥ ಸಹಾಯಕ ಆಯುಕ್ತನು ಅಥವಾ ಉಪ ಆಯುಕ್ತನು, ತನ್ನ ಷರಾಗಳೊಡನೆ ಪ್ರಸ್ತಾವವನ್ನು ಬಜೆಟ್ಟನ್ನು ಮಂಜೂರ್ಮಾಡುವ ಪ್ರಾಧಿಕಾರಿಯಾದ ಸಂದರ್ಭಾನುಸಾರ ಉಪ ಆಯುಕ್ತನಿಗೆ ಅಥವಾ ಆಯುಕ್ತನಿಗೆ ಕಳುಹಿಸಿಕೊಡತಕ್ಕದ್ದು.

7) ಒಂದು ಆರ್ಥಿಕ ವರ್ಷದ ಅವಧಿಯಲ್ಲಿ, ವಿವಿಧ ಶೀರ್ಷಿಕೆಗಳ ಅಡಿಯಲ್ಲಿ ವೆಚ್ಚ ಮಾಡಬೇಕಾದ ಮೊಬಲಗಿನ ಸ್ವೀಕೃತಿ ಅಥವಾ ಹಂಚಿಕೆಗೆ ಸಂಬಂಧಿಸಿದಂತೆ, ಬಜೆಟ್ಟಿನಲ್ಲಿ ಮಾಡಲಾದ ಹಣದ ಏರ್ಪಾಡುಗಳನ್ನು ಮಾರ್ಪಡಿಸುವುದು ಅವಶ್ಯಕವೆಂದು ಅಧ್ಯಕ್ಷರಿಗೆ ಅಥವಾ ಕಾರ್ಯನಿರ್ವಾಹಕ ಅಧಿಕಾರಿಗೆ ಕಂಡುಬಂದರೆ, ಪೂರಕ ಅಥವಾ ಪರಿಷ್ಕ ೃತ ಬಜೆಟ್ಟನ್ನು (4)ನೇ ಉಪ-ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಪ್ರಾಧಿಕಾರಿಗೆ ಸಲ್ಲಿಸಬಹುದು, ಅದರ ಬಗ್ಗೆ (5) ಮತ್ತು (6)ನೇ ಉಪ-ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ವ್ಯವಹರಿಸತಕ್ಕದ್ದು.

**37. ಲೆಕ್ಕಗಳ ನಿರ್ವಹಣೆ ಮತ್ತು ಲೆಕ್ಕ ಪರಿಶೋಧನೆ.**- (1) ಅಧ್ಯಕ್ಷ ಅಥವಾ ವ್ಯವಸ್ಥಾಪಕ ಅಥವಾ ಕಾರ್ಯನಿರ್ವಾಹಣಾಧಿಕಾರಿಯನ್ನು ನೇಮಕ ಮಾಡಿರುವಲ್ಲಿ ಕಾರ್ಯನಿರ್ವಹಣಾಧಿಕಾರಿಯು ಸಂಸ್ಥೆಗಳ ಲೆಕ್ಕಗಳನ್ನು ನಿಯತವಾಗಿ ಇಡಲು ಜವಾಬ್ದಾರನಾಗಿತಕ್ಕದ್ದು.

2) ಲೆಕ್ಕಗಳನ್ನು ನಿಯಮಿಸಬಹುದಾದಂಥ ನಮೂನೆಯಲ್ಲಿ ನಿರ್ವಹಿಸತಕ್ಕದ್ದು ಮತ್ತು ಅಂಥ ರೀತಿಯಲ್ಲಿ ವಾರ್ಷಿಕ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು;

ಪರಂತು, ಐದು ಲಕ್ಷ ರೂಪಾಯಿ ಅಥವಾ ಹೆಚ್ಚು ಒಟ್ಟು ವಾರ್ಷಿಕ ಆದಾಯವಿರುವ ಸಂಘಗಳ ಸಂದರ್ಭದಲ್ಲಿ, ಲೆಕ್ಕ ಪತ್ರಗಳನ್ನು ರಾಜ್ಯ ಲೆಕ್ಕ ಪತ್ರ ಇಲಾಖೆಯಿಂದ ಲೆಕ್ಕ ಪರಿಶೋಧನೆ ಮಾಡಿಸತಕ್ಕದ್ದು.

3) (2)ನೇ ಉಪ-ಪ್ರಕರಣದ ಅಡಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪ್ರತಿಯೊಬ್ಬ ಲೆಕ್ಕಪರಿಶೋಧಕನಿಗೆ, ಅಧ್ಯಕ್ಷರ, ವ್ಯವಸ್ಥಾಪಕ ಅಥವಾ ಸಂದರ್ಭಾನುಸಾರ ಕಾರ್ಯನಿರ್ವಾಹಣಾಧಿಕಾರಿಯ ಸ್ವಾಧೀನ ಅಥವಾ ನಿಯಂತ್ರಣದಲ್ಲಿರುವ ಎಲ್ಲ ಲೆಕ್ಕ ಪುಸ್ತಕಗಳು, ಓಚರ್‌ಗಳು, ಇತರ ದಸ್ತಾವೇಜುಗಳು ಮತ್ತು ದಾಖಲೆಗಳನ್ನು ನೋಡಲು ಅವಕಾಶವಿರತಕ್ಕದ್ದು.

4) ಹಿಂದಿನ ಉಪ-ಪ್ರಕರಣಗಳಲ್ಲಿ ಏನೇ ಇದ್ದರೂ, ಆಯುಕ್ತನು, ಕಾರಣಗಳನ್ನು ಲಿಖಿತದಲ್ಲಿ ದಾಖಲು ಮಾಡಿ, ಯಾವುದೇ ಅಧಿಸೂಚಿತ ಸಂಸ್ಥೆಯ ಲೆಕ್ಕಪತ್ರಗಳ ವಿಶೇಷ ಲೆಕ್ಕಪರಿಶೋಧನೆ ಮಾಡಿಸುವಂತೆ ನಿರ್ದೇಶಿಸಬಹುದು.

**xx** **xx** **xx**

**53. ಒಂದು ಸ್ವತ್ತು ಅಧಿಸೂಚಿತ ಸಂಸ್ಥೆಯ ಸ್ವತ್ತೇ ಅಥವಾ ಘೋಷಿತ ಸಂಸ್ಥೆಯ ಸ್ವತ್ತೇ ಎಂಬ ಬಗ್ಗೆ ತೀರ್ಮಾನ.**- ಒಂದು ನಿರ್ದಿಷ್ಟ ಸ್ವತ್ತು ಈ ಅಧಿನಿಯಮದ ಅಡಿಯಲ್ಲಿ ಅಧಿಸೂಚಿತ ಸಂಸ್ಥೆಯ ಸ್ವತ್ತೇ ಅಥವಾ ಘೋಷಿತ ಸಂಸ್ಥೆಯ ಸ್ವತ್ತೇ ಎಂಬ ಬಗ್ಗೆ ಪ್ರಶ್ನೆ ಉದ್ಭವಿಸಿದಾಗಲೆಲ್ಲಾ, ಉಪ-ಆಯುಕ್ತನು, ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಆ ಪ್ರಶ್ನೆಯನ್ನು ತೀರ್ಮಾನಿಸತಕ್ಕದ್ದು.

**54. ಭೂಮಿ ಮತ್ತು ಕಟ್ಟಡಗಳ ಒತ್ತುವರಿ.–** (1) ಒಂದು ಅಧಿಸೂಚಿತ ಸಂಸ್ಥೆ ಅಥವಾ ಘೋಷಿತ ಸಂಸ್ಥೆಗೆ ಸೇರಿದ ಪವಿತ್ರವಾದ ಯಾವುದೇ ಕಲ್ಯಾಣಿ, ಬಾವಿ, ನೀರಿನ ಚಿಲುಮೆ ಅಥವಾ ತೊರೆಗೆ, ಅದು ಸಂಸ್ಥೆಯ ಆವರಣದೊಳಗೇ ಇರಲಿ ಅಥವಾ ಹೊರಗೇ ಇರಲಿ, ಹೊಂದಿಕೊಂಡಿರುವ ಅಥವಾ ಅದಕ್ಕೆ ಲಗತ್ತಾಗಿರುವ ಯಾವುದೇ ಭೂಮಿ ಅಥವಾ ಕಟ್ಟಡವನ್ನು ಅಥವಾ ಸಂಸ್ಥೆಯ ಪ್ರಕಾರಗಳು, ಮಂಟಪಗಳು, ಪ್ರಾಂಗಣಗಳು ಅಥವಾ ಮೊಗಸಾಲೆಯ ಒಳಗಿನ ಅಥವಾ ಹೊರಗಿನ ಯಾವುದೇ ಜಾಗವನ್ನು ಯಾವೊಬ್ಬ ವ್ಯಕ್ತಿ ಒತ್ತುವರಿ ಮಾಡಿದ್ದಾನೆಂದು ನಂಬಲು ಸಹಾಯಕ ಆಯುಕ್ತನಿಗೆ ಕಾರಣವಿದ್ದರೆ, ಅವನು, ಒತ್ತುವರಿಯ ವಿವರಗಳನ್ನು ನಿರ್ದಿಷ್ಟಪಡಿಸುವ ಮತ್ತು ಒತ್ತುವರಿಯನ್ನು ತೆಗೆದು ಹಾಕಲು ಅವನನ್ನು ಅಗತ್ಯಪಡಿಸುವಂಥ ಆದೇಶವನ್ನು ಏಕೆ ಹೊರಡಿಸಬಾರದು ಎಂಬ ಬಗ್ಗೆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮೊದಲು ಕಾರಣವನ್ನು ತೋರಿಸಲು ಕೋರುವ ಒಂದು ನೋಟೀಸನ್ನು ಒತ್ತುವರಿದಾರನಿಗೆ ಜಾರಿಗೊಳಿಸುವಂತೆ ಮಾಡಬಹುದು. ನೋಟೀಸಿನ ಒಂದು ಪ್ರತಿಯನ್ನು ಸಂಸ್ಥೆಯ ಅಧ್ಯಕ್ಷ, ವ್ಯವಸ್ಥಾಪಕ ಅಥವಾ ಅದರಲ್ಲಿ ಹಿತಾಸಕ್ತಿಯನ್ನುಳ್ಳ ಇತರ ಯಾವೊಬ್ಬ ವ್ಯಕ್ತಿಗೆ ಸಹ ಕಳುಹಿಸತಕ್ಕದ್ದು ಮತ್ತು ಒತ್ತುವರಿದಾರನ ಅಥವಾ ಅಧ್ಯಕ್ಷ, ವ್ಯವಸ್ಥಾಪಕ ಅಥವಾ ಅಂಥ ಇತರ ವ್ಯಕ್ತಿಯ ಆಕ್ಷೇಪಣೆಗಳು ಏನಾದರೂ ಇದ್ದರೆ, ಅವುಗಳನ್ನು ಪರಿಶೀಲಿಸಿದ ತರುವಾಯ, ಒತ್ತುವರಿ ಇದೆಯೆಂಬುದಾಗಿ ಸಹಾಯಕ ಆಯುಕ್ತನು ತೀರ್ಮಾನಿಸಿದರೆ, ಅವನು, ಒತ್ತುವರಿಯನ್ನು ತೆಗೆದುಹಾಕುವಂತೆ ಮತ್ತು ಒತ್ತುವರಿ ಮಾಡಲಾಗಿರುವ ಭೂಮಿ ಅಥವಾ ಕಟ್ಟಡದ ಸ್ವಾಧೀನತೆಯನ್ನು ಆದೇಶದಲ್ಲಿ ನಿರ್ದಿಷ್ಟಪಡಿಸಲಾದ ದಿನಾಂಕಕ್ಕೆ ಮೊದಲು ಸಂಸ್ಥೆಯ ಅಧ್ಯಕ್ಷ, ವ್ಯವಸ್ಥಾಪಕ ಅಥವಾ ಅದರಲ್ಲಿ ಹಿತಾಸಕ್ತಿಯುಳ್ಳಂಥ ಇತರ ಯಾವೊಬ್ಬ ವ್ಯಕ್ತಿಗೆ ವಹಿಸಿಕೊಡುವಂತೆ ಆದೇಶದ ಮೂಲಕ ಅಗತ್ಯಪಡಿಸಬಹುದು.

2) (1)ನೇ ಉಪ-ಪ್ರಕರಣದ ಅಡಿಯಲ್ಲಿ ಆದೇಶದಲ್ಲಿ ನಿರ್ದಿಷ್ಟಪಡಿಸಲಾದ ದಿನಾಂಕಕ್ಕೆ ಮೊದಲು, ಒತ್ತವರಿದಾರನು ಒತ್ತುವರಿಯನ್ನು ತೆಗೆದುಹಾಕಿಲ್ಲದಿದ್ದರೆ ಮತ್ತು ಭೂಮಿ, ಕಟ್ಟಡ ಅಥವಾ ಸ್ಥಳವನ್ನು ಖಾಲಿ ಮಾಡದಿದ್ದರೆ, ಸಹಾಯಕ ಆಯುಕ್ತನು, ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಹೊರಹಾಕುವ) ಅಧಿನಿಯಮ, 1974ರ ಉಪಬಂಧಗಳ ಅನುಸಾರವಾಗಿ ಅಂಥ ಭೂಮಿ, ಕಟ್ಟಡ ಅಥವಾ ಸ್ಥಳವನ್ನು ಪುನಃ ಸ್ವಾಧೀನಕ್ಕೆ ಪಡೆದು ಅಂಥ ಸಂಸ್ಥೆಗೆ ವಹಿಸಿಕೊಡಲು ಕ್ರಮ ಕೈಗೊಳ್ಳತಕ್ಕದ್ದು.

**55. ಕೆಲವು ಸಂದರ್ಭಗಳಲ್ಲಿ ಸ್ವಾಧೀನತೆಯನ್ನು ಹೊಂದಿರುವ ಗೇಣಿದಾರ, ಲೈಸೆನ್ಸುದಾರ ಅಥವಾ ಅಡಮಾನದಾರನನ್ನು ಹೊರಹಾಕುವ ಅಧಿಕಾರ.–** (1) ಅಧಿಸೂಚಿತ ಸಂಸ್ಥೆ ಅಥವಾ ಘೋಷಿತ ಸಂಸ್ಥೆಗೆ ಸೇರಿದ ಯಾವುದೇ ಭೂಮಿ ಅಥವಾ ಕಟ್ಟಡದ ಸ್ವಾಧೀನತೆಯನ್ನು ಹೊಂದಿರುವ ಗೇಣಿದಾರ, ಲೈಸೆನ್ಸುದಾರ ಅಥವಾ ಅಡಮಾನದಾರನು ಸಂಸ್ಥೆಯ ಕಲಾತ್ಮಕ ಸ್ವರೂಪವನ್ನು, ಉಪಾಸನಾತ್ಮಕ ಸೌಂದರ್ಯವನ್ನು ಅಥವಾ ಧಾರ್ಮಿಕ ಲಕ್ಷಣವನ್ನು ಕೆಡಿಸುವ ಅಥವಾ ಕೆಡಿಸುವ ಸಂಭವವಿರುವ ಯಾವುದೇ ಕೃತ್ಯವನ್ನು ಕೈಗೊಂಡಿದ್ದಾನೆಂದು ಸಹಾಯಕ ಆಯುಕ್ತನು ಅಭಿಪ್ರಾಯಪಟ್ಟಲ್ಲಿ, ಆಯುಕ್ತನು ಸಂಬಂಧಪಟ್ಟ ಗೇಣಿದಾರ, ಲೈಸನ್ಸುದಾರ ಅಥವಾ ಅಡಮಾನದಾರನಿಗೆ ಗೇಣಿ ಅಥವಾ ಲೈಸೆನ್ಸು ಅಥವಾ ಅಡಮಾನವನ್ನು ಕೊನೆಗೊಳಿಸುವ ಮತ್ತು ಒಂದು ನಿರ್ದಿಷ್ಟ ದಿನಾಂಕಕ್ಕೆ ಮುಂಚೆ ಅಧ್ಯಕ್ಷ, ವ್ಯವಸ್ಥಾಪಕ, ಕಾರ್ಯನಿರ್ವಹಣಾಧಿಕಾರಿ ಅಥವಾ ಸಂಸ್ಥೆಯ ವ್ಯವಹಾರಗಳಿಗೆ ಸಂಬಂಧಪಟ್ಟ ಇತರ ವ್ಯಕ್ತಿಗೆ ಸ್ವಾಧೀನತೆಯನ್ನು ಒಪ್ಪಿಸುವಂತೆ ನಿರ್ದೇಶಿಸುವ ಒಂದು ಆದೇಶವನ್ನು ಏಕೆ ನೀಡಬಾರದೆಂದು ಕಾರಣವನ್ನು ತೋರಿಸಲು ಕೋರುವ ನೋಟೀಸನ್ನು ಜಾರಿಗೊಳಿಸುವಂತೆ ಮಾಡತಕ್ಕದ್ದು. ನೋಟೀಸಿನ ಒಂದು ಪ್ರತಿಯನ್ನು ಸಂಸ್ಥೆಯ ಅಧ್ಯಕ್ಷ, ವ್ಯವಸ್ಥಾಪಕ, ಕಾರ್ಯನಿರ್ವಹಣಾಧಿಕಾರಿ ಅಥವಾ ಇತರ ವ್ಯಕ್ತಿಗೂ ಸಹ ಜಾರಿಗೊಳಿಸತಕ್ಕದ್ದು.

2) ಗೇಣಿದಾರ, ಲೈಸೆನ್ಸುದಾರ ಅಥವಾ ಅಡಮಾನದಾರನಿಂದ ಸ್ವೀಕರಿಸಲಾದ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಅವುಗಳನ್ನು ಪರಿಗಣಿಸಿದ ತರುವಾಯ, ಗೇಣಿದಾರ, ಲೈಸನ್ಸುದಾರ ಅಥವಾ ಅಡಮಾನದಾರನು ಕೈಗೊಂಡ ಕೃತ್ಯದಿಂದ ಕಲಾತ್ಮಕ ಸ್ವರೂಪ, ಉಪಾಸನತ್ಮಾಕ ಸೌಂದರ್ಯ ಅಥವಾ ಧಾರ್ಮಿಕ ಲಕ್ಷಣವನ್ನು ಕೆಡಿಸುವುದೆಂದು ಅಥವಾ ಕೆಡಿಸುವ ಸಂಭವವಿದೆಯೆಂದು ಸಹಾಯಕ ಆಯುಕ್ತನು ತೀರ್ಮಾನಿಸಿದರೆ, ಅವನು ಆದೇಶದ ಮೂಲಕ ಗೇಣಿ ಅಥವಾ ಲೈಸೆನ್ಸು ಅಥವಾ ಅಡಮಾನವನ್ನು ಕೊನೆಗೊಳಿಸಬಹುದು ಮತ್ತು ಆದೇಶದಲ್ಲಿ ನಿರ್ದಿಷ್ಟಪಡಿಸಲಾದ ದಿನಾಂಕಕ್ಕೆ ಮುಂಚೆ ಅಧ್ಯಕ್ಷ, ವ್ಯವಸ್ಥಾಪಕ ಅಥವಾ ಕಾರ್ಯನಿರ್ವಹಣಾಧಿಕಾರಿಗೆ ಅಥವಾ ಸಂಸ್ಥೆಯ ವ್ಯವಹಾರಗಳನ್ನು ನಡೆಸುವ ಇತರ ವ್ಯಕ್ತಿಗೆ ಸ್ವತ್ತಿನ ಸ್ವಾಧೀನತೆಯನ್ನು ಒಪ್ಪಿಸುವಂತೆ ನಿರ್ದೇಶಿಸಬಹುದು.

3) (2)ನೇ ಉಪ-ಪ್ರಕರಣದಡಿಯ ಆದೇಶದಲ್ಲಿ ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮೊದಲು ಗೇಣಿದಾರ, ಲೈಸೆನ್ಸುದಾರ ಅಥವಾ ಅಡಮಾನದಾರನು ಸ್ವತ್ತಿನ ಸ್ವಾಧೀನತೆಯನ್ನು ಒಪ್ಪಿಸಿಲ್ಲದಿದ್ದರೆ ಸಹಾಯಕ ಆಯುಕ್ತನು ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಬೋಗದಾರರನ್ನು ಹೊರಹಾಕುವ) ಅಧಿನಿಯಮ, 1974ರ ಅಡಿಯಲ್ಲಿ ಸ್ವತ್ತಿನ ಸ್ವಾಧೀನತೆ ಪಡೆದು ಅದನ್ನು ಸಂಸ್ಥೆಗೆ ವಹಿಸಿಕೊಡಲು ಕ್ರಮ ಕೈಗೊಳ್ಳಬಹುದು.

**Xx xx xx**

**63. [1][ಪ್ರಾದೇಶಿಕ ಕಮೀಷನರ್][1]ನ ಪುನರೀಕ್ಷಣಾ ಅಧಿಕಾರಗಳು.–** (1) [1][ಪ್ರಾದೇಶಿಕ ಕಮೀಷನರ್][1]ನು, ಸಹಾಯಕ ಆಯುಕ್ತನು ಅಥವಾ ಉಪ ಆಯುಕ್ತನು ಅಭಿಲೇಖಿಸಿದ ಅಥವಾ ಹೊರಡಿಸಿದ ನಿರ್ಣಯ ಅಥವಾ ಆದೇಶದ ಖಚಿತತೆಯ ಬಗ್ಗೆ ಮನದಟ್ಟು ಮಾಡಿಕೊಳ್ಳುವ ಉದ್ದೇಶಕ್ಕಾಗಿ ಸಹಾಯಕ ಆಯುಕ್ತನ ಅಥವಾ ಉಪ ಆಯುಕ್ತನ ಮುಂದಿರುವ ದಾಖಲೆಗಳು ಮತ್ತು ವ್ಯವಹರಣೆಗಳನ್ನು ತರಿಸಿಕೊಂಡು ಪರೀಕ್ಷಿಸಬಹುದು ಮತ್ತು ಸದರಿ ನಿರ್ಣಯ ಅಥವಾ ಆದೇಶವನ್ನು ರದ್ದುಗೊಳಿಸಬಹುದು, ವ್ಯತಿರಿಕ್ತಗೊಳಿಸಬಹುದು ಅಥವಾ ಮಾರ್ಪಡಿಸಬಹುದು ಅಥವಾ ಸ್ಥಿರೀಕರಿಸಬಹುದು ಅಥವಾ ಮತ್ತಷ್ಟು ವಿಚಾರಣೆ ನಡೆಸಲು ಅಥವಾ ತಾನು ಅಗತ್ಯವೆಂದು ಭಾವಿಸಬಹುದಾದಂಥ ಹೆಚ್ಚುವರಿ ಸಾಕ್ಷ್ಯವನ್ನು ಪಡೆಯಲು ಸಹಾಯಕ ಆಯುಕ್ತನಿಗೆ ಅಥವಾ ಉಪ-ಆಯುಕ್ತನಿಗೆ ನಿರ್ದೇಶನ ನೀಡಬಹುದು ಅಥವಾ ತಾನೇ ಹೆಚ್ಚುವರಿ ಸಾಕ್ಷ್ಯವನ್ನು ಪಡೆಯಬಹುದು.

ಪರಂತು, ಪ್ರಾದೇಶಿಕ ಕಮೀಷನರ್, ಯಾವುದೇ ಆದೇಶವನ್ನು ಅದರಿಂದ ಬಾಧಿತರಾದ ಪಕ್ಷಕಾರರಿಗೆ ಅಹವಾಲು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ಹೊರತು ಅಭಿಲೇಕಿಸತಕ್ಕದ್ದಲ್ಲ ಅಥವಾ ಹೊರಡಿಸತಕ್ಕದ್ದಲ್ಲ.

2) (1)ನೇ ಉಪ-ಪ್ರಕರಣದಲ್ಲಿರುವುದಾವುದೂ, ಅಪೀಲು ಸಲ್ಲಿಸಬಹುದಾದ ಅವಧಿಯಲ್ಲಿ ಅಥವಾ ಅಂಥ ಅಪೀಲಿನ ಮೇಲೆ ಪ್ರಾದೇಶಿಕ ಕಮೀಷನರ್ ಒಂದು ಆದೇಶವನ್ನು ಹೊರಡಿಸಿದ ತರುವಾಯ ಯಾವುದೇ ಮೊಕದ್ದಮೆಯ ದಾಖಲೆಗಳನ್ನು ತರಿಸಿಕೊಂಡು ಪರೀಕ್ಷಿಸಲು ಅವನನ್ನು ಹಕ್ಕುಳ್ಳವನನ್ನಾಗಿಸತಕ್ಕದ್ದಲ್ಲ.

**Xx xx xx**

**66. ವಿಚಾರಣೆಯನ್ನು ನಡೆಸುವ ಅಧಿಕಾರಿಗಳು ಸಿವಿಲ್ ನ್ಯಾಯಾಲಯದ ಅಧಿಕಾರಗಳನ್ನು ಹೊಂದಿರಬೇಕು.**- ಈ ಅಧಿನಿಯಮದ ಅಡಿಯಲ್ಲಿ ವಿಚಾರಣೆಗಳನ್ನು ನಡೆಸುವಾಗ, ಅದನ್ನು ನಡೆಸುವ ಅಧಿಕಾರಿಯು ಸಿವಿಲ್ ಪ್ರಕ್ರಿಯಾ ಸಂಹಿತೆ 1908ರ ಅಡಿಯಲ್ಲಿ ಈ ಕೆಳಗಿನ ವಿಷಯಗಳ ಸಂಬಂಧದಲ್ಲಿ ಎಂದರೆ.-

ಎ) ಅಫಿಡಾವಿಟ್ಟುಗಳಿಂದ ಸಂಗತಿಗಳನ್ನು ರುಜುವಾತು ಪಡಿಸುವುದು;

ಬಿ) ಯಾವೊಬ್ಬ ವ್ಯಕ್ತಿಗೆ ಸಮನು ನೀಡುವುದು ಮತ್ತು ಹಾಜರಾತಿಗಾಗಿ ಒತ್ತಾಯಿಸುವುದು ಮತ್ತು ಪ್ರಮಾಣದ ಮೇಲೆ ಅವನನ್ನು ಪರೀಕ್ಷಿಸುವುದು;

ಸಿ) ದಸ್ತಾವೇಜುಗಳನ್ನು ಹಾಜರುಪಡಿಸುವುದು;

ಡಿ) ಕಮೀಷನುಗಳನ್ನು ಹೊರಡಿಸುವುದು,

- ಇವುಗಳ ಸಂಬಂಧದಲ್ಲಿ ದಾವೆಯ ವಿಚಾರಣೆಯನ್ನು ನಡೆಸುವಾಗ ಸಿವಿಲ್ ನ್ಯಾಯಾಲಯಗಳಲ್ಲಿ ನಿಹಿತವಾಗಿರುವಂಥ ಅವೇ ಅಧಿಕಾರಗಳನ್ನು ಹೊಂದಿರತಕ್ಕದ್ದು.

**Xx xx xx**

**68. ಅಧಿಕಾರ ವ್ಯಾಪ್ತಿಗೆ ಪ್ರತಿಬಂಧ.**- ಈ ಅಧಿನಿಯಮದಲ್ಲಿ ಸ್ಪಷ್ಟವಾಗಿ ಉಪಬಂಧಿಸಲಾಗಿರುವುದನ್ನುಳಿದು, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಯಾವೊಬ್ಬ ಅಧಿಕಾರಿ ಅಥವಾ ಪ್ರಾಧಿಕಾರವು ನಿರ್ಣಯಿಸಬೇಕೆಂದು ಅಥವಾ ವ್ಯವಹರಿಸಬೇಕೆಂದು ಅಗತ್ಯಪಡಿಸಲಾದ ಯಾವುದೇ ಪ್ರಶ್ನೆಯನ್ನು ಅಥವಾ ಯಾವ ಪ್ರಶ್ನೆಯ ಸಂಬಂಧದಲ್ಲಿ ಅಂಥ ಅಧಿಕಾರಿಯ ಅಥವಾ ಪ್ರಾಧಿಕಾರದ ನಿರ್ಣಯ ಅಥವಾ ಆದೇಶವನ್ನು ಅಂತಿಮ ಮತ್ತು ನಿರ್ಣಾಯಕವೆಂದು ಹೇಳಲಾಗಿದೆಯೋ ಆ ಪ್ರಶ್ನೆಯ ಬಗ್ಗೆ ನಿರ್ಣಯಿಸಲು ಅಥವಾ ವ್ಯವಹರಿಸಲು ಯಾವ ಸಿವಿಲ್ ನ್ಯಾಯಾಲಯವು ಅಧಿಕಾರ ವ್ಯಾಪ್ತಿಯನ್ನು ಹೊಂದಿರತಕ್ಕದ್ದಲ್ಲ.

**Xx xx xx**

**71. ಆಯುಕ್ತ ಮುಂತಾದವರು ಕಾನೂನು ವ್ಯವಹರಣೆಗಳ ಬಗ್ಗೆ ಭರಿಸಿದ ಖರ್ಚುಗಳು ಮತ್ತು ವೆಚ್ಚಗಳು.**- ಒಂದು ಹಿಂದೂ ಧಾರ್ಮಿಕ ಸಂಸ್ಥೆ ಅಥವಾ ಧರ್ಮಾದಾಯ ದತ್ತಿಯ ಸಂಬಂಧದಲ್ಲಿ ಆಯುಕ್ತ, ಉಪ ಆಯುಕ್ತ ಅಥವಾ ಸಹಾಯಕ ಆಯುಕ್ತನು ಕಾನೂನು ವ್ಯವಹರಣೆಗೆ ಪಕ್ಷಕಾರನಾಗಿ ಅಥವಾ ಅದರ ಸಂಬಂಧವಾಗಿ ಭರಿಸುವ ಎಲ್ಲಾ ಖರ್ಚುಗಳು, ಶುಲ್ಕಗಳು ಮತ್ತು ವೆಚ್ಚದ ಮೊತ್ತವನ್ನು, ಅದನ್ನು ಭರಿಸುವ ಹೊಣೆಯು ಅದನ್ನು ಒಂದು ಪಕ್ಷ ಅಥವಾ ವೈಯಕ್ತಿಕವಾಗಿ ಇತರ ವ್ಯಕ್ತಿಯ ಮೇಲೆ ಇದ್ದ ಹೊರತು ಅಥವಾ ಈ ಪ್ರಕರಣದ ಅಡಿಯಲ್ಲಿ ಆ ಹಣವನ್ನು ತುಂಬಿಸಿಕೊಡುವ ಹಕ್ಕನ್ನು ಸ್ಪಷ್ಟವಾಗಿ ನಿರಾಕರಿಸಿದ್ದ ಹೊರತು, ಅಂಥ ಸಂಸ್ಥೆಯ ಸ್ವತ್ತು ಅಥವಾ ನಿಧಿಗಳಿಂದ ಸಂದಾಯ ಮಾಡತಕ್ಕದ್ದು.

**72. ನ್ಯಾಯಾಲಯದ ಮುಂದಿರುವ ವ್ಯವಹರಣೆಗಳ ಖರ್ಚುಗಳು.**- ಉಚ್ಛ ನ್ಯಾಯಾಲಯವು ಸೇರಿದಂತೆ ಯಾವುದೇ ನ್ಯಾಯಾಲಯದಲ್ಲಿರುವ, ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ದಾವೆ, ಅಪೀಲು ಅಥವಾ ಅರ್ಜಿಯ ಅಥವಾ ಅದಕ್ಕೆ ಅನುಷಂಗಿಕವಾದ ಖರ್ಚುಗಳು, ಶುಲ್ಕಗಳು ಮತ್ತು ವೆಚ್ಚಗಳು ನ್ಯಾಯಾಲಯದ ವಿವೇಚನೆಗನುಸಾರವಾಗಿರತಕ್ಕದ್ದು ಮತ್ತು ಅವುಗಳನ್ನು ಪೂರ್ಣವಾಗಿ ಅಥವಾ ಭಾಗಶಃ ಸಂಬಂಧಪಟ್ಟ ಧಾರ್ಮಿಕ ಸಂಸ್ಥೆಯ ಸ್ವತ್ತು ಅಥವಾ ನಿಧಿಗಳಿಂದ ವಹಿಸಬೇಕೆಂದು ಅಥವಾ ತಾನು ಉಚಿತವೆಂದು ಭಾವಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ವ್ಯಕ್ತಿಗಳು ಭರಿಸಿ ಸಂದಾಯ ಮಾಡಬೇಕೆಂದು ನ್ಯಾಯಾಲಯವು ನಿರ್ದೇಶಿಸಬಹುದು.

**73. ಆಯುಕ್ತ ಅಥವಾ ಉಪ ಆಯುಕ್ತ ಅಥವಾ ಸಹಾಯಕ ಆಯುಕ್ತನ ಮುಂದಿರುವ ವ್ಯವಹರಣೆಗಳ ವೆಚ್ಚಗಳು.**- ಆಯುಕ್ತ ಅಥವಾ ಉಪ ಆಯುಕ್ತ ಅಥವಾ ಸಹಾಯಕ ಆಯುಕ್ತನ ಮುಂದಿರುವ ಯಾವುದೇ ಅಪೀಲು, ಅರ್ಜಿ ಅಥವಾ ಇತರ ವ್ಯವಹರಣೆಗಳು ಮತ್ತು ಅದಕ್ಕೆ ಆನುಷಂಗಿಕವಾದ ಖರ್ಚುಗಳು, ಶುಲ್ಕಗಳು ಮತ್ತು ಇತರ ವೆಚ್ಚಗಳು ಆತನ ವಿವೇಚನೆಗನುಸಾರವಾಗಿ ಇರತಕ್ಕದ್ದು ಮತ್ತು ಅಂಥ ಖರ್ಚು, ಶುಲ್ಕಗಳು ಮತ್ತು ವೆಚ್ಚಗಳನ್ನು ಯಾರು ಸಂದಾಯ ಮಾಡಬೇಕು ಹಾಗೂ ಯಾವ ಸ್ವತ್ತು ಅಥವಾ ನಿಧಿಯಿಂದ ಸಂದಾಯ ಮಾಡಬೇಕು ಮತ್ತು ಎಷ್ಟು ಸಂದಾಯ ಮಾಡಬೇಕೆಂಬುದನ್ನು ನಿರ್ಧರಿಸಲು ಆತನು ಪೂರ್ಣ ಅಧಿಕಾರವನ್ನು ಹೊಂದಿರತಕ್ಕದ್ದು.

**Xx xx xx**

**76. ನಿಯಮಗಳ ರಚನಾಧಿಕಾರ.**- (1) ರಾಜ್ಯ ಸರ್ಕಾರವು, ಪೂರ್ವ ಪ್ರಕಟಣೆಯ ನಂತರ ಮತ್ತು ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಉಪಬಂಧಗಳನ್ನು ಪರಿಣಾಮಕಾರಿಯಾಗಿ ನೆರವೇರಿಸುವ ಉದ್ದೇಶಕ್ಕಾಗಿ ಅವಶ್ಯಕವಾಗಬಹುದಾದ ಅಂಥ ನಿಯಮಗಳನ್ನು ರಚಿಸಬಹುದು.

2) ವಿಶೇಷವಾಗಿ ಮತ್ತು ಪೂರ್ವೋಕ್ತ ಉಪಬಂಧಗಳ ಸಾಮಾನ್ಯತೆಗೆ ಪ್ರತಿಕೂಲವಾಗದಂತೆ ಕೆಳಕಂಡ ಎಲ್ಲ ಅಥವಾ ಯಾವುದೇ ವಿಷಯದ ಬಗ್ಗೆ ಅಂಥ ನಿಯಮಗಳನ್ನು ರಚಿಸಬಹುದು, ಎಂದರೆ.-

ಎ) 5ನೇ ಪ್ರಕರಣದ ಅಡಿಯಲ್ಲಿ ನೇಮಕ ಮಾಡಿದ ಅಧೀನಾಧಿಕಾರಿಗಳ ಪದನಾಮ, ಅಧಿಕಾರಗಳು, ಕರ್ತವ್ಯಗಳು ಮತ್ತು ಪ್ರಕಾರ್ಯಗಳು;

ಬಿ) 12ನೇ ಪ್ರಕರಣದ ಅಡಿಯಲ್ಲಿ ಅರ್ಚಕರ ಹಾಗೂ 15ನೇ ಪ್ರಕರಣದ ಅಡಿಯಲ್ಲಿ ದೇವಸ್ಥಾನದ ನೌಕರರ ಉಪಲಬ್ಧಿಗಳು, ಕೆಲಸದ ವೇಳೆ ಮತ್ತು ಸೇವೆಯ ಷರತ್ತುಗಳು.

ಸಿ) 14ನೇ ಪ್ರಕರಣದ ಅಡಿಯಲ್ಲಿ ದೇವಸ್ಥಾನದ ನೌಕರರ ಕ್ರಮಪಟ್ಟಿ;

ಡಿ) 20ನೇ ಪ್ರಕರಣದ ಅಡಿಯಲ್ಲಿ ಸಲಹಾ ಸಮಿತಿಯ ವ್ಯವಹಾರಗಳ ನಿರ್ವಹಣೆ;

ಇ) 24ನೇ ಪ್ರಕರಣದ ಅಡಿಯಲ್ಲಿ ಒಂದು ಅಧಿಸೂಚಿತ ಸಂಸ್ಥೆಯ ಸಂಬಂಧದಲ್ಲಿ ಆಯುಕ್ತನು ಉಪ-ಆಯುಕ್ತನು ಅಥವಾ ಸಹಾಯಕ ಆಯುಕ್ತನು ನಿರ್ವಹಿಸಬೇಕಾದ ಕರ್ತವ್ಯಗಳು ಮತ್ತು ಚಲಾಯಿಸಬೇಕಾದ ಮೇಲ್ವಿಚಾರಣೆ ಮತ್ತು ನಿಯಂತ್ರಣದ ಅಧಿಕಾರಗಳು.

ಎಫ್) 25ನೇ ಪ್ರಕರಣದ ಅಡಿಯಲ್ಲಿ ವ್ಯವಸ್ಥಾಪನಾ ಸಮಿತಿಯನ್ನು ರಚಿಸಲು ಸಕ್ಷಮವಾದ ಪ್ರಾಧಿಕಾರ ಮತ್ತು ಅಂಥ ಸಮಿತಿಯ ಸದಸ್ಯರನ್ನು ನೇಮಕ ಮಾಡುವ ಕಾರ್ಯವಿಧಾನ ಮತ್ತು ಅವರ ಪೂರ್ವ ವೃತ್ತಾಂತ ಮತ್ತು ಇತರ ವಿಷಯಗಳ ಪರಿಶೀಲನೆ.

ಜಿ) 27ನೇ ಪ್ರಕರಣದ ಅಡಿಯಲ್ಲಿನ ವ್ಯವಸ್ಥಾಪನಾ ಸಮಿತಿಯ ಸಭೆಗಳನ್ನು ನಡೆಸಬೇಕಾದ ಕಾರ್ಯವಿಧಾನ;

ಹೆಚ್) ಈ ಅಧಿನಿಯಮದ ಅಡಿಯಲ್ಲಿ ಅಪೀಲನ್ನು ಸಲ್ಲಿಸುವ ನಮೂನೆ ಮತ್ತು ಸಂದಾಯ ಮಾಡಬೇಕಾದ ಶುಲ್ಕ;

ಐ) 41ನೇ ಪ್ರಕರಣದ ಅಡಿಯಲ್ಲಿ ವಾರ್ಷಿಕ ಲೆಕ್ಕ ಪರಿಶೋಧಿತ ವಿತರಣ ಪತ್ರವನ್ನು ಹಾಗೂ ಸ್ವತ್ತುಗಳ ವಿವರಣ ಪತ್ರವನ್ನು ದಾಖಲ್ಮಾಡುವ ನಮೂನೆ ಹಾಗೂ ವಿಧಾನ;

ಜೆ) 43ನೇ ಪ್ರಕರಣದ ಅಡಿಯಲ್ಲಿನ ವಿಚಾರಣೆಯ ವಿಧಾನ;

ಕೆ) ದಸ್ತಾವೇಜುಗಳ ಪರಿಶೀಲನೆ ಮತ್ತು ಅಂಥ ಪರಿಶೀಲನೆಗೆ ವಿಧಿಸಬೇಕಾದ ಶುಲ್ಕಗಳು;

ಎಲ್) ಆದೇಶಿಕೆಗಳು ಮತ್ತು ನೋಟೀಸುಗಳನ್ನು ನೀಡುವುದಕ್ಕೆ ಮತ್ತು ಜಾರಿ ಮಾಡುವುದಕ್ಕೆ ವಿಧಿಸಬೇಕಾದ ಶುಲ್ಕ;

ಎಮ್) ಪ್ರಮಾಣೀಕೃತ ಪ್ರತಿಗಳ ನೀಡಿಕೆ ಮತ್ತು ಅದಕ್ಕಾಗಿ ವಿಧಿಸಬೇಕಾದ ಶುಲ್ಕಗಳು;

ಎನ್) VIIನೇ ಅಧ್ಯಾಯದ ಅಡಿಯಲ್ಲಿ ಅಧ್ಯಕ್ಷ, ವ್ಯವಸ್ಥಾಪಕ ಕಾರ್ಯನಿರ್ವಹಣಾಧಿಕಾರಿ ಅಥವಾ ಅಂಥ ಇತರ ವ್ಯಕ್ತಿಯು ಸಲ್ಲಿಸಬೇಕಾದ ಬಜೆಟ್ಟಿನ ನಮೂನೆ;

ಓ) ಲೆಕ್ಕ ಪರಿಶೋಧನಾ ಶುಲ್ಕದ ಶೇಕಡಾವಾರು ಪ್ರಮಾಣ;

ಪಿ) ವಾಸ್ತು ಶಿಲ್ಪ, ಶಿಲ್ಪಕಲೆ ಮತ್ತು ಶಾಸನ ಸ್ವರೂಪದವುಗಳನ್ನು ಒಳಗೊಂಡಂತೆ ಅಧಿಸೂಚಿತ ಸಂಸ್ಥೆಗಳ ಅಥವಾ ಘೋಷಿತ ಸಂಸ್ಥೆಗಳ ಸ್ವತ್ತುಗಳ ಮತ್ತು ಕಟ್ಟಡಗಳ ಸಂರಕ್ಷಣೆ, ನಿರ್ವಹಣೆ, ವ್ಯವಸ್ಥಾಪನೆ ಮತ್ತು ಅಭಿವೃದ್ಧಿ;

ಕ್ಯೂ) ಲೆಕ್ಕ ಪತ್ರವು ಒಳಗೊಂಡಿರಬೇಕಾದ ವಿವರಗಳು ಮತ್ತು ಅಧಿಸೂಚಿತ ಸಂಸ್ಥೆಗಳ ಲೆಕ್ಕ ಪತ್ರಗಳ ಲೆಕ್ಕ ಪರಿಶೋಧನೆಯ ವಿಧಾನ ಮತ್ತು ಲೆಕ್ಕಪರಿಶೋಧನೆಯ ಸಮಯ ಮತ್ತು ಸ್ಥಳ ಮತ್ತು ಲೆಕ್ಕ ಪರಿಶೋಧಕರ ವರದಿಯ ನಮೂನೆ ಮತ್ತು ಒಳಾಂಶಗಳು;

ಆರ್) ಅಧಿಸೂಚಿತ ಸಂಸ್ಥೆಗಳ ಅಂದಾಜುಗಳ ತಯಾರಿಕೆ ಮತ್ತು ಮಂಜೂರಾತಿ ಮತ್ತು ಟೆಂಡರುಗಳ ಅಂಗೀಕಾರ ಮತ್ತು ಸರಬರಾಜು;

ಎಸ್) 50ನೇ ಪ್ರಕರಣದ ಅಡಿಯಲ್ಲಿ ವಿಚಾರಣೆಗೆ ಹಾಜರಾಗುತ್ತಿರುವ ವ್ಯಕ್ತಿಯ ಖರ್ಚುಗಳ ನೀಡಿಕೆ;

ಟಿ) ಈ ಅಧಿನಿಯಮದ ಮೇರೆಗೆ ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದ ಇತರೆ ಯಾವುದೇ ವಿಷಯ.

3) ಈ ಪ್ರಕರಣದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ನಿಯಮ ಮತ್ತು 77ನೇ ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು ಅದನ್ನು ಮಾಡಿದ ಅಥವಾ ಹೊರಡಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಒಂದು ಅಥವಾ ಎರಡು ಅಥವಾ ಹೆಚ್ಚಿನ ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನವು ಅಥವಾ ಅದಕ್ಕೆ ನಿಕಟೋತ್ತರದ ಅಧಿವೇಶನಗಳು ಮುಕ್ತಾಯವಾಗುವುದಕ್ಕೆ ಮೊದಲು ಆ ನಿಯಮದಲ್ಲಿ ಅಥವಾ ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಡು ಮಾಡಬೇಕೆಂದು ಎರಡು ಸದನಗಳೂ ಒಪ್ಪಿದರೆ ಅಥವಾ ಆ ನಿಯಮ ಅಥವಾ ಅಧಿಸೂಚನೆಯನ್ನು ಮಾಡಕೂಡದೆಂದು ಎರಡು ಸದನಗಳು ಒಪ್ಪಿದರೆ ಆ ನಿಯಮ ಅಥವಾ ಅಧಿಸೂಚನೆಯು ಆ ತರುವಾಯ ಸಂದರ್ಭಾನುಸಾರ, ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ; ಆದರೆ ಅಂಥ ಯಾವುದೇ ಮಾರ್ಪಾಡು ಅಥವಾ ರದ್ದಿಯಾತಿ ಆ ನಿಯಮ ಅಥವಾ ಅಧಿಸೂಚನೆಯ ಅಡಿಯಲ್ಲಿ ಹಿಂದೆ ಮಾಡಲಾದ ಯಾವುದೇ ವಿಷಯದ ಕಾನೂನು ಮಾನ್ಯತೆಗೆ ಪ್ರತಿಕೂಲವಾಗದಂತೆ ಇರತಕ್ಕದ್ದು.

**Xx xx xx**

ತಾತ್ಕಾಲಿಕವಾಗಿ ಅಂಗೀಕರಿಸಿದೆ

## ಕರ್ನಾಟಕ ವಿಧಾನ ಪರಿಷತ್ತು

## ನೂರ ಹದಿನಾಲ್ಕನೇ ಅಧಿವೇಶನ

## (ಮುಂದುವರೆದ ಉಪವೇಶನಗಳು)

## ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ವಿಧೇಯಕ, 2011

**(2011ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ : 4)**

## ತಿದ್ದೋಲೆ

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ವಿಧೇಯಕ, 2011ರ ಕನ್ನಡ ಆವೃತ್ತಿಯಲ್ಲಿ (2011ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ: 4)ಕ್ಕೆ ತಿದ್ದೋಲೆ,-

(1) 3ನೇ ಖಂಡದ (9)ನೇ ಉಪ ಖಂಡದಲ್ಲಿ ಪ್ರತಿಯೋಜಿಸಲು ಉದ್ದೇಶಿಸಲಾದ (17)ನೇ ಖಂಡದಲ್ಲಿ "ಬಸದಿ, ಬೌದ್ಧ ವಿಹಾರ, ಗುರುದ್ವಾರ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(2) 17ನೇ ಖಂಡದ (i)ನೇ ಉಪ ಖಂಡದಲ್ಲಿ ಪ್ರತಿಯೋಜಿಸಲು ಉದ್ದೇಶಿಸಲಾದ 25ನೇ ಪ್ರಕರಣದ (1)ನೇ ಉಪ ಪ್ರಕರಣದ ಮೊದಲನೇ ಪರಂತುಕದಲ್ಲಿ "ಮತ್ತು ಜೈನ, ಬೌದ್ಧ ಹಾಗೂ ಸಿಖ್ಖರಿಗೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

ವಿ. ಶ್ರೀಶ್
ಕಾರ್ಯದರ್ಶಿ

## KARNATAKA LEGISLATIVE COUNCIL
## HUNDRED AND FOURTEENTH SESSION
## (ADJOURNED MEETINGS)

## THE KARNATAKA HINDU RELIGIOUS INSTITUTIONS AND CHARITABLE ENDOWMENTS (AMENDMENT) BILL, 2011

**(L.C. Bill No. 04 of 2011)**

A Bill further to amend the Karnataka Hindu Religious Institutions and Charitable Endowments Act, 1997.

Whereas it is expedient further to amend the Karnataka Hindu Religious Institutions and Charitable Endowments Act, 1997 (Karnataka Act 33 of 2001) for the purposes hereinafter appearing;

Be it enacted by the Karnataka State Legislature in the Sixty Second year of the Republic of India as follows:-

**1. Short title and commencement.-** (1) This Act may be called the Karnataka Hindu Religious Institutions and Charitable Endowments (Amendment) Act, 2011.

(2) It shall come into force at once.

**2. Amendment of section 1.-** In the Karnataka Hindu Religious Institutions and Charitable Endowments Act, 1997 (Karnataka Act 33 of 2001) (hereinafter referred to as the principal Act), in section 1, for sub-section (4), the following shall be substituted, namely:-

"(4) It shall not apply to a math or temple attached to or managed by math."

**3. Amendment of section 2.-** In section 2 of the principal Act,-

(1) for clause (1), the following shall be substituted, namely:-

"(1) "Architectural committee" means the Architectural committee constituted under Section 69D".

(2) for clause (5), the following shall be substituted, namely:-

"(5) "Charitable Endowment" means all property given or endowed for any religious charitable purpose."

(3) for clause (6), the following shall be substituted, namely:-

"(6) "Charitable Institution" means any establishment, undertaking, organisaton or association formed for a charitable purpose and includes specific endowment and Dharmadayam."

(4) after clause (10), the following shall be inserted, namely:-

"(10A) "Composite Institution" means and include an institution of religious and charitable endowment or place of worship of Hindus and other religion commonly and jointly worshipped by Hindus and other religion according to the custom, tradition and usage prevailing there in."

(5) after clause (12), the following shall be inserted, namely:-

"(12A) "Dharmika Parishat" means the Rajya Dharmika Parishat constituted under section 20 or Zilla Dharmika Parishat constituted under section 21 as the case may be."

(6) after clause (14), the following shall be inserted, namely:-

"(14A) "Endowment Survey Officer" means the endowment Survey Officer appointed under section 31.

"(14B) "Family Temple" means any temple established or maintained exclusively by the members of any family either by themselves or family trustees consisting of family members only.

(14C) "Family Charitable Endowment" means any Charitable Institution established and maintained exclusively by the funds of a family or by the members of the family which is not receiving any donation or contribution from public in whatever form."

(7) in clause (15), after the words "law of succession for the time being in force", the words "or declared as such by any court of law or by the statutory authority under any enactment or recorded as such under any enactment shall be inserted."

(8) for clause (16), the following shall be substituted, namely:-

"(16) "Hindu Religious Denomination" means a collection of Hindu Individuals or devotees classed together under the same name, a Hindu religious section or sub-section or body or a section thereof or the spiritual fraternity represented by it having a common faith, rituals, observances, ceremonies and mode of worship which is designated by a distinctive name."

(9) for clause (17), the following shall be substituted, namely:-

"(17) "Religious Institution" means a temple or an endowment and includes a brindavana, samadhi, peetha, paduka or any other institution established or maintained for a religious purpose."

(10) after clause (19), the following shall be inserted, namely:-

"(19A) "Math" means a religious institution presided over by a person whose principal duty is to engage himself, in teaching and propagation of religion, teachings and philosophy of the denomination, sect or sampradaya to which the Math belongs and in imparting religious instruction and training and rendering spiritual service who exercises or claims to exercise spiritual headship over a body of disciples and includes any place or places of religious worship, instruction or training which are pertinent to the institution including religious institutions attached either religiously or administratively to the Maths."

(11) in clause (23), the words "other than an institution which is an inseparable integral part of a composite institution consisting of institutions other than religious institutions also" shall be omitted.

(12) for clause (27), the following shall be substituted, namely:-

"(27) "Temple" means a place by whatever name called, used as a place of public religious worship having separate existence and dedicated to or for the benefit of or used as of right by the Hindu Community or any section thereof as a place of public religious worship and includes a Mandira, Samadhi, Brindavana, Gadduge, Shrine, Sub-shrine, Utsav Mantapa, tank, Paduka-peetha, Daivasthana, Gudi, Garodi or other necessary appurtenances, structures and land."

**4. Amendment of section 3.-** In section 3 of the principal Act, in sub-section (2), after the words "corporate sole and", the words "subject to the powers and jurisdiction of the Rajya Dharmika Parishat" shall be inserted.

**5. Amendment of section 4.-** In section 4 of the principal Act,-

(1) in sub-section (1), after the words "subject to the authority of the Commissioner", the words "and subject to the powers and jurisdiction of Zilla Dharmika Parishat" shall be inserted;

(2) in sub-section (2), after the words "to perform such duties or exercise such powers as may be conferred on him", the words "and subject to the powers and jurisdiction of Zilla Dharmika Parishat" shall be inserted.

**6. Amendment of section 9.-** In section 9 of the principal Act,-

(i) in the heading and sub-section (1), after the words, "Archakas", the words "and temple servants" shall be inserted; and

(ii) after sub-section (1), the following provisos shall be inserted, namely:-

"Provided that in case of hereditary post, if there is no dispute among the members of the family, the next in line of succession shall be appointed; with the prior approval of the commissioner:

Provided further that in case where no legal heir of the hereditary post are available the Committee of Management may appoint any person as provided under sub-section (1)."

(iii) in sub-section (3), after the words, "the number of archakas", the words "and temple servants" shall be inserted.

**7. Amendment of section 10.-** In section 10 of the principal Act,-

(i) in sub-section (1), for the word and bracket "(wara)", the word and the bracket "(pravara)" shall be substituted;

(ii) for sub-section (2), the following shall be substituted, namely:-

"(2) Archaka other than hereditary Archaks who are in service on the date of the commencement of the Karnataka Hindu religious institution and charitable endowments (Amendment) Act, 2011 may be continued as Archaka who shall acquire the prescribed qualification within the period of five years unless he has crossed forty-five years of age."

**8. Insertion of section 10A.-** After section 10 of the principal Act, the following shall be inserted, namely:-

"**10A. Disqualification of Archaks**.- A person shall be disqualified for being appointed as Archak or being continued as Archak if he,-

(a) is suffering from any virulent or contagious disease; or

(b) is unable to recite Vedic mantras or Shlokas relating to the rituals in temple concerned with clarity and without any fault, other than temples, where reciting of vedic Mantras or Shlokas is not compulsory or mandatory;

(c) is not free from 'Sapta Vyasanas'.

**Explanation.**- The expression 'Sapta Vyasanas' means gambling, consuming intoxicating liquor and drugs, smoking, immoral sexual conduct, involved in heinous crime, stealing and cheating."

**9. Amendment of section 12.-** In section 12 of the principal Act,-

(i) in sub-section (1), after the words and comma 'rotation of work' the comma and words, "retirement of non-hereditary Archaks and temple servants" shall be inserted; and

(ii) for sub-section (2), the following shall be substituted namely:-

"(2) the emoluments, pay and allowances of Archaks and temple servants shall be fair and reasonable having due regard to the income, usage, custom and tradition prevailing in the respective notified institution. The State Government may classify the temples into two or more classes based on their income, as may be prescribed."

**10. Amendment of section 17.-** In section 17 of the principal Act,-

(i) for the word “Commissioner” the words “Rajya Dharmika Parishat” shall be substituted;

(ii) for clause (a), the following shall be substituted, namely:-

“(a) contributions made by the notified or declared institutions at the following rate:-

(1) ten percent of the net income in respect of institutions whose gross annual income exceeds rupees ten lakhs;

(2) five percent of the net income in respect of institutions whose gross annual income exceed rupees five lakhs but does not exceed rupees ten lakhs.”

**11. Amendment of section 19.-** In section 19 of the principal Act,-

(i) in sub-section (1),-

(a) for the word “Commissioner”, the words “Rajya Dharmika Parishat” shall be substituted;

(b) for clause (i), the following shall be substituted, namely:-

“ (i) payment of terminal benefits to the Archaks and temple servants where there is no sufficient fund at the credit of the institution;”

(ii) sub-section (3) shall be omitted.

**12. Amendment of section 20.-** For section 20 of the principal Act, the following shall be substituted, namely:-

**“20. Rajya Dharmika Parishat.-**(1) The State Government may, by notification in the official Gazette constitute the Rajya Dharmika Parishat consisting of the following members, namely:-

| | | |
|---|---|---|
| (a) | Minister in Charge of Hindu Religious, Institutions and Charitable Endowments | Chairman |
| (b) | Secretary to Government in charge of<br>Hindu Religious Institutions and Charitable, Endowments | Vice Chairman |
| (c) | Commissioner, Hindu Religious Institutions and Charitable Endowments | Ex-officio Secretary |
| (d) | Members to be nominated by Government for a period of three years | |
| | (i) One Retired District Judge | member |
| | (ii) One Agama scholar | member |
| | (iii) one vedic scholar | member |
| | (iv) one person belong to SC or ST | member |
| | (v) one person belonging to backward classes | member |
| | (vi) one woman | member |
| | (vii) two others | member |

(2) The members nominated by Government under sub-section (1), except a retired district Judge, shall hold office subject to the pleasure of Government.

(3) The member nominated by Government shall be a person who has contributed to the Hindu Religious field but shall not be an office bearer of any political party in any level.

(4) In the event of any vacancy due to death, resignation or otherwise, the Government may appoint a member for the remaining period of the term of such member.

(5) The Rajya Dharmika Parishat may, for the purpose of consultation, invite any person having experience and specialized knowledge or expert in any subject to attend its meeting and every such person is entitled to such allowances as may be prescribed.

(6) The Government may delegate any of its powers and functions other than the power to make rules under the provisions of the Act to the Rajya Dharmika Parishat.

(7) In the absence of Chairman, the Vice Chairman shall preside over the meeting of the Rajya Dharmika Parishad.

(8) In the absence of nominated member the remaining members constitute the Rajya Dharmika Parishat.

(9) All the correspondence in respect of or to the Rajya Dharmika Parishat shall be made by or to the Secretary, Rajya Dharmika Parishat including the power to sue or be sued.

**20A. The powers and functions of the Rajya Dharmika Parishat.-** The powers and functions of the Rajya Dharmika Parishat shall be as follows, namely:-

(1) The Rajya Dharmika Parishat shall be empowered to resolve any dispute,-

(a) regarding religious practices, customs, usage, traditions and for that purpose it may consult experts to assist in resolving such disputes;

(b) as to whether a temple is a public, private or denominational temple;

(c) as to whether an institutions is a religious institution or a composite institution;

(d) as to whether a trustee holds or held office as hereditary trustee of such institution.

(2) The Rajya Dharmika Parishat,-

(i) may constitute a Committee of Management to the notified institution having gross annual income of rupees ten lakhs and above;

(ii) may approve scheme for adoption of temples having an income of rupees two lakhs or less and to fix the terms of adoption;

(iii) shall act as appellate authority in respect of orders passed by the Zilla Dharmika Parishat;

(iv) for the purpose of resolving any dispute as provided under this section Nyayadhikarana may be constituted with the judicial member of the Parishat and the Commissioner as its members. If there is difference of opinion among the members the issue shall be decided by the Rajya Dharmika Parishat;

(v) may recommend to the State Government to issue notification and de-notification of the institutions required to be notified or deleted under the provisions of the Act;

(vi) may dissolve Committee of Management of a notified institution having gross income of Rupees ten lakhs and above as provided under section 28 and to appoint administrator to the notified institutions under section 29;

(vii) shall record the name of the member of the family, who is entitled to succeed to the office of hereditary trustee when a permanent vacancy occurs and if there is no dispute in the office of the hereditary trustee."

**13. Amendment of section 21.-** For section 21 of the principal Act, the following shall be substituted, namely:-

"**21 Zilla Dharmika Parishat.-** (1) The State Government may, on the recommendation of the Rajya Dharmika Parishat, by notification, in the official Gazette, constitute a Zilla Dharmika Parishat to each district or to one or more districts consisting of the following members, namely:-

| | | |
|---|---|---|
| (a) | The Deputy Commissioner of the concerned District | Chairman |
| (b) | The concerned Assistant Commissioner, Hindu Religious Institution and Charitable Endowments wherever available or Endowment Tahsildar or Endowment Assistant of the Deputy Commissioners Office. | Ex-officio Secretary |
| (c) | Members to be nominated by Government for a period of three years | |
| | (i) one retired Judicial Officer not below the cadre of Civil Judge (Senior Division) | Member |
| | (ii) one Agama Pandit | Member |
| | (iii) one Vedic Scholar | Member |
| | (iv) one from scheduled Caste or Scheduled Tribe | Member |
| | (v) one woman | Member |
| | (vi) one person from backward classes | Member |
| | (vii) two others | Member |

(2) Members nominated by Government under clause (iii) of sub-section (1) except a retired Judicial Officer, shall hold office subject to the pleasure of Government.

(3) The person nominated by Government shall be a person who has contributed to the Hindu Religious field but shall not be an office bearer of any political party in any lelvel.

(4) In the event of any vacancy due to death, resignation or otherwise the Government may appoint a person for the remaining period of the term of such member.

(5) The Zilla Dharmika Parishat may for the purpose of consultation, invite any person having experience and specialized knowledge or expert in any subject to attend its meeting and every such person is entitled to such allowance as may be prescribed.

(6) The Government or Rajya Dharmika Parishat may, by notification, delegate any of its powers and functions under the provisions of this Act except the power to make rules to the Zilla Dharmika Parishat.

(7) In the absence of the Chairman, Vice-Chairman shall preside over the meeting of the Zilla Dharmika Parishat.

(8) In the absence of nominated member of Zilla Dharmika Parishat, the remaining members shall constitute the Zilla Dharmika Parishat.

(9) All the correspondence in respect of Zilla Dharmika Parishat shall be made by or to the Secretary, Zilla Dharmika Parishat including the power to sue or be sued.

**21A. Powers and functions of the Zilla Dharmika Parishat.-** (1) The Zilla Dharmika Parishat shall exercise such powers and perform such duties and functions as may be prescribed.

(2) The Zilla Dharmika Parishat in addition to the powers, duties and functions under sub-section (1), shall have power to,-

(a) constitute a Committee of Management to the notified institutions having gross annual income of Rupees One lakh and above but below Rupees Ten lakhs;

(b) dissolve the committee of Management of the notified institutions having income of Rupees One lakh and above but below Rupees Ten lakhs, as provided under section 28.

(3) The disputes falling within the jurisdiction of Zilla Dharmika Parishat, shall be resolved by a Nyayadhikarana consisting of a judicial member and the secretary of the Parishat. If there is any difference of opinion among them the issue shall be decided by the Zilla Dharmika Parishat.

**21B. Qualification and disqualification of the members of the Dharmika Parishats.-** (1) The member of the Rajya Dharmika Parishat and Zilla Dharmika Parishat shall be a Hindu and he shall cease to hold office whenever cease to profess such religion.

(2) A person shall be disqualified for being appointed or for being continued as a member of the Parishat,-

(a) if he is an undischarged insolvent ;or

(b) if he is of unsound mind and stands so declared by a competent court; or

(c) if he has been sentenced by a criminal court for an offence involving moral turpitude; or

(d) if he has at anytime acted adverse to the interest of the Hindu Religious Institutions; or

(e) if he is addicted to intoxicating liquor or drugs or gambling.

**21C. Removal and disqualification of the members of the Rajya Dharmika Parishat and Zilla Dharmika Parishat.-** The State Government may remove or disqualify a non-official member of the Rajya Dharmika Parishat or Zilla Dharmika Parishat on proven misconduct and misbehavior after holding such enquiry on such charges as it may deems fit.

**21D. Meeting of the Rajya Dharmika Parishad and Zilla Dharmika Parishat.-** (1) The periodical meetings of the Rajya Dharmika Parishat and Zilla Dharmika Parishat shall be held at such intervals as may be prescribed.

(2) The sitting fees and allowances payable to the members of the Rajya Dharmika Parishat and Zilla Dharmika parishat, shall be such as may be prescribed.

**21E. Control by the State Governments.-** The State Government shall have general administrative and supervisory control over the activities and affairs of the Rajya Dharmika Parishat and Zilla Dharmika Parishat.

**21F. Adoption of smaller notified institution by larger institution or charitable institution.-** (1) Any notified institution whose annual gross income is less than rupees two lakhs may, with the prior approval of the Rajya Dharmika Parishat, be adopted for a period of five years by any other larger notified institution or declared institution or a math or a registered trust or association, whose object is also religious or charitable:

Provided that the period of adoption may be extended by the Rajya Dharmika Parishat for sufficient and good reasons.

(2) The conditions of adoption shall be such as may be prescribed:

Provided that the Rajya Dharmika Parishat may for sufficient reason terminate the adoption with due notice to the adopter."

**14. Amendment of section 23.-** In section 23 of the principal Act,-

(i) in clause (a), after the words "State Government" the words "under the provisions of Mysore Religious and Charitable Institutions Act, 1927" shall be inserted;

(ii) for clause (e), the following shall be substituted, namely:-

" (e) All Hindu Religious Institutions registered under the Bombay Public Trust Act, 1950;

(ee) All Hindu Religious Institutions which are in receipt of any monthly or annual grant from public revenue or any amount under the Karnataka Certain Inams (Abolition) Act, 1977."

**15. Amendment of section 24.-** In section 24 of the principal Act, in sub-section (1), for the words "the Commissioner shall be the Chief Controlling Authority", the words "subject to the powers and jurisdiction of the Rajya Dharmika Parishat the Commissioner shall be the Chief Controlling Authority" shall be substituted.

**16. Insertion of section 24 A.-** After section 24 of the principal Act, the following shall be inserted, namely:-

**"24A. Appointment of Executive Officer and term of office.-** (1) The State Government or the Commissioner as the case may be, may appoint any officer to be the executive officer to a notified institution or to a group of notified institutions.

(2) The cadre of the executive officer to be appointed to the notified institution may be, based on the income of such institution.

(3) The executive Officer shall hold office for such term as may be fixed by the State Government and he shall exercise such power and perform such duties as may be prescribed.

(4) The executive Officer shall be deemed to be a public servant within the meaning of Section 21 of the Indian Penal Code 1860."

**17. Amendment of section 25.-** In section 25 of the principal Act,-

(i) for sub-section (1), the following shall be substituted, namely:-

"(1) There shall be constituted by Rajya Dharmika Parishat or Zilla Dharmika parishat a committee of Management consisting of nine members:

Provided that the committee of management in respect of notified institutions belonging to religious denomination be constituted by themselves according to the usage and practice prevailing therein as on the date of commencement of the Karnataka Hindu religious institutions and Charitable endowments (Amendment)Act, 2011 and the same shall be recognized by the Rajya Dharmika Parishat or the Zilla Dharmika Parishat as the case may be:

Provided further that every Committee of Management or Pancha Committtee or Dharmadarshi Committee or Non-hereditary Trustees constituted or appointed under the repealed Acts who were lawfully holding office shall cease to hold office from the date of the commencement of the Karnataka Hindu Religious Institutions and Charitable Endowments (Amendment) Act, 2011."

(ii) in sub-section (3),-

(a) for the words "prescribed authority", the words "the Rajya Dharmika Parishat or the Zilla Dharmika Parishat as the case may be" shall be substituted;

(b) for clause (iii), the following shall be substituted, namely:-

"(iii) of the other, two are women and at least one member from among the persons living in the locality of the temple".

**4. 6ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 6ನೇ ಪ್ರಕರಣದ (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಮತ್ತು ಹಣಕಾಸು ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿಯನ್ನು ಒಳಗೊಂಡಂತೆ, ಅಧಿಸೂಚಿಸಬಹುದಾದ ಇತರ ಸರ್ಕಾರದ ಕಾರ್ಯದರ್ಶಿಗಳು ಸದಸ್ಯರಾಗಿರುವ ಆರ್ಥಿಕ ನಿರ್ವಹಣಾ ಪುನರೀಕ್ಷಣಾ ಸಮಿತಿಯನ್ನು ರಚಿಸಬಹುದು. ಅದು ರಾಜ್ಯದ ಹಣಕಾಸು ಮತ್ತು ಸಾಲದ ಸ್ಥಿತಿ ಗತಿಯನ್ನು ಮತ್ತು ತನ್ನ ಆರ್ಥಿಕ ಸರಿದೂಗಿಸುವಿಕೆಯ ಪಥದಲ್ಲಿ ರಾಜ್ಯದ ಪ್ರಗತಿಯನ್ನು ಪುನರೀಕ್ಷಿಸಲು ಮತ್ತು ಅಗತ್ಯವೆನಿಸಬಹುದಾದ ಸುಧಾರಕ ಕ್ರಮಗಳ ಬಗ್ಗೆ ಸಲಹೆ ನೀಡುವುದಕ್ಕಾಗಿ, ವರ್ಷಕ್ಕೆ ಕನಿಷ್ಠ ಎರಡು ಸಲ ಸಭೆ ಸೇರತಕ್ಕದ್ದು. ಪುನರೀಕ್ಷಣೆಯ ಪ್ರಕ್ರಿಯೆ ಮತ್ತು ವಿಧಾನವು ನಿಯಮಿಸಬಹುದಾದಂತೆ ಇರತಕ್ಕದ್ದು.

(2ಎ) ಆರ್ಥಿಕ ಇಲಾಖೆಯ ಪ್ರಭಾರ ಹೊಂದಿರುವ ಸಚಿವರು, ಪ್ರತಿ ಆರು ತಿಂಗಳಿಗೊಮ್ಮೆ ಬಜೆಟ್‌ಗೆ ಸಂಬಂಧಿಸಿದ ಸ್ವೀಕೃತಿಗಳು ಮತ್ತು ವೆಚ್ಚಗಳಲ್ಲಿನ ಪ್ರವೃತ್ತಿಗಳು, ಹಣಕಾಸು ನಿರ್ವಹಣಾ ಪುನರೀಕ್ಷಣಾ ಸಮಿತಿಯು ಶಿಫಾರಸ್ಸು ಮಾಡಿದಂತೆ ಬಜೆಟ್ ಗುರಿಗಳನ್ನು ಸಾಧಿಸಲು ಕೈಗೊಳ್ಳಬೇಕಾದ ಪರಿಹಾರ ಕ್ರಮಗಳನ್ನು ಪುನರೀಕ್ಷಿಸತಕ್ಕದ್ದು. ಮತ್ತು ಅಂಥ ಪುನರೀಕ್ಷಣೆಗಳ ಪರಿಣಾಮವನ್ನು ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು. ಪುನರೀಕ್ಷಣಾ ವರದಿಯು ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಇರತಕ್ಕದ್ದು."

**5. 11ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ, ಪರಂತುಕಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಪರಂತು, ಕರ್ನಾಟಕ ಆರ್ಥಿಕ ಹೊಣೆಗಾರಿಕೆ (ತಿದ್ದುಪಡಿ)ಅಧಿನಿಯಮ, 2011ರ ಪ್ರಾರಂಭದ ದಿನಾಂಕದಿಂದ ಎರಡು ವರ್ಷಗಳು ಮುಕ್ತಾಯವಾದ ತರುವಾಯ ಈ ಪ್ರಕರಣದ ಅಡಿಯಲ್ಲಿ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ರಾಜ್ಯಕ್ಕೆ ನಿರ್ದಿಷ್ಟ ಅನುದಾನಗಳನ್ನು ಬಿಡುಗಡೆ ಮಾಡಲು ಮತ್ತು ಸಾಲ ಪರಿಹಾರ ಕ್ರಮಗಳಿಗಾಗಿ ಪೂರ್ವ ನಿದರ್ಶನ ಷರತ್ತಿನಂತೆ XIII ನೇ ಹಣಕಾಸು ಆಯೋಗದ ಶಿಫಾರಸ್ಸಿನ ಆಧಾರದ ಮೇಲೆ ಭಾರತ ಸರ್ಕಾರವು ನಿಯಮಿಸಲಾದ ಕ್ರಮಗಳನ್ನು ಅನುಷ್ಠಾನಗೊಳಿಸುವುದಕ್ಕಾಗಿ ಕರ್ನಾಟಕ ಆರ್ಥಿಕ ಹೊಣೆಗಾರಿಕೆ ಅಧಿನಿಯಮ, 2002ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತು ಜ್ಞಾಪನ ಪತ್ರ

**ಖಂಡ–4**

(i) ಸೇರಿಸಲು ಉದ್ದೇಶಿಸಿರುವ 6ನೇ ಪ್ರಕರಣದ (2)ನೇ ಉಪಪ್ರಕರಣವು, ಆರ್ಥಿಕ ನಿರ್ವಹಣಾ ಪುನರೀಕ್ಷಣಾ ಸಮಿತಿಯು ಪುನರೀಕ್ಷಣೆಗಾಗಿ ಅನುಸರಿಸಬೇಕಾದ ಪ್ರಕ್ರಿಯೆ ಮತ್ತು ವಿಧಾನಗಳ ಸಂಬಂಧದಲ್ಲಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(ii) ಸೇರಿಸಲು ಉದ್ದೇಶಿಸಿರುವ 6ನೇ ಪ್ರಕರಣದ (2ಎ) ಉಪಪ್ರಕರಣವು, ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸಲು ಆರ್ಥಿಕ ನಿರ್ವಹಣಾ ಪುನರೀಕ್ಷಣಾ ಸಮಿತಿಯು ಸಲ್ಲಿಸಬೇಕಾದ ಪುನರೀಕ್ಷಣಾ ವರದಿಯ ನಮೂನೆಯ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು ಮತ್ತು ಆರ್ಥಿಕ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಆರ್ಥಿಕ ಹೊಣೆಗಾರಿಕೆ ಅಧಿನಿಯಮ, 2002ರ (2002ರ ಕರ್ನಾಟಕ ಅಧಿನಿಯಮ 16) ಉದ್ಧೃತ ಭಾಗ**

**xxxxx**

**4. ಆರ್ಥಿಕ ನಿರ್ವಹಣಾ ತತ್ವಗಳು.**– (1) **xxxxx**

(3) ರಾಜ್ಯ ಸರ್ಕಾರವು, ವಿಶೇಷವಾಗಿ ಮತ್ತು ಪೂರ್ವೋಕ್ತ ಉಪಬಂಧಗಳ ಸಾಮಾನ್ಯತೆಗೆ ಬಾಧಕವಾಗದಂತೆ,–

(ಎಫ್) 2002ರ ಏಪ್ರಿಲ್ 1ನೇ ದಿನಾಂಕದಿಂದ ಪ್ರಾರಂಭವಾಗುವ ಮೊದಲನೆ ಆರ್ಥಿಕ ವರ್ಷದಿಂದ 2015ರ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಹದಿಮೂರು ಆರ್ಥಿಕ ವರ್ಷಗಳ ಅವಧಿಯೊಳಗೆ, ಕೊನೆಯ ಆರ್ಥಿಕ ವರ್ಷದ ಅಂತ್ಯದಲ್ಲಿ ಒಟ್ಟು ದಾಯಿತ್ವಗಳು ಆ ವರ್ಷದ ಅಂದಾಜು ಒಟ್ಟು ರಾಜ್ಯ ಆಂತರಿಕ ಉತ್ಪನ್ನದ ಶೇಕಡಾ ಇಪ್ಪತ್ತೈದನ್ನು ಮೀರದಂತೆ ನೋಡಿಕೊಳ್ಳುವುದು:

ಪರಂತು, ರಾಜಸ್ವ ಕೊರತೆ ಮತ್ತು ಆರ್ಥಿಕ ಕೊರತೆಯು, ರಾಷ್ಟ್ರೀಯ ಭದ್ರತೆಗಾಗಿ ಅಥವಾ ನೈಸರ್ಗಿಕ ವಿಕೋಪಗಳಿಂದಾಗಿ, ರಾಜ್ಯ ಸರ್ಕಾರದ ಹಣಕಾಸಿನ ಮೇಲೆ ಅನಿರೀಕ್ಷಿತ ಬೇಡಿಕೆಯನ್ನುಂಟುಮಾಡುವ ಕಾರಣ ಅಥವಾ ಕಾರಣಗಳಿಂದಾಗಿ ಈ ಉಪಪ್ರಕರಣದ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಮಿತಿಗಳನ್ನು ಮೀರಬಹುದು. ಆದರೆ ನೈಸರ್ಗಿಕ ವಿಕೋಪಗಳಿಂದಾಗಿ ಮಿತಿಗಳನ್ನು ಮೀರಿ ಆಗಿರುವ ಹೆಚ್ಚುವರಿಗಳು, ಆ ವಿಕೋಪಗಳಿಂದ ಆಯಿತೆನ್ನಲಾದ ವಾಸ್ತವಿಕ ಆರ್ಥಿಕ ವೆಚ್ಚವನ್ನು ಮೀರತಕ್ಕದ್ದಲ್ಲವೆಂಬ ಷರತ್ತಿಗೊಳಪಟ್ಟಿರಬೇಕು.

ಮತ್ತೂ ಪರಂತು, 2008–09ನೇ ಸಾಲಿನಲ್ಲಿ ಆರ್ಥಿಕ ಉತ್ತೇಜನದ ಪ್ಯಾಕೇಜಿನ ಒಂದು ಭಾಗವಾಗಿ ಆರ್ಥಿಕ ಕೊರತೆಯು ಈಗಿರುವ ಮಿತಿಯನ್ನು ಅಂದಾಜು ಒಟ್ಟು ರಾಜ್ಯದ ಆಂತರಿಕ ಉತ್ಪನ್ನದ ಶೇಕಡ 3.5ರಷ್ಟರವರೆಗೆ ಮೀರಬಹುದು. ಹಾಗೆ ಸಡಿಲಗೊಳಿಸಿದ ಪರಿಮಿತಿಗಳ ಅಡಿಯಲ್ಲಿ ಪಡೆದುಕೊಂಡ ಹೆಚ್ಚುವರಿ ಮಾರುಕಟ್ಟೆ ಸಾಲಗಳನ್ನು 2008–09ನೇ ವರ್ಷದಲ್ಲಿ ಬಂಡವಾಳ ವೆಚ್ಚಗಳನ್ನು ಕೈಗೊಳ್ಳಲು ಉಪಯೋಗಿಸಿಕೊಳ್ಳತಕ್ಕದ್ದು. ಅನುಸರಣಾ ಕ್ರಮವಾಗಿ ಅಂಥ ಬಂಡವಾಳ ವೆಚ್ಚದ ವಿವರಗಳು ಮತ್ತು ಅದರಿಂದ ಉಂಟಾಗಬಹುದಾದ ಪರಿಣಾಮಗಳನ್ನು ಉಲ್ಲೇಖಿಸುವ ಒಂದು ವರದಿಯನ್ನು ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

ಅಲ್ಲದೆ ಪರಂತು, 2009–10ನೇ ಹಣಕಾಸು ವರ್ಷದಲ್ಲಿ ಆರ್ಥಿಕ ಕೊರತೆಯು ರಾಜ್ಯದ ಅಂದಾಜು ಒಟ್ಟು ಆಂತರಿಕ ಉತ್ಪನ್ನದ ಶೇಕಡಾ 4ರಷ್ಟನ್ನು ಮೀರತಕ್ಕದ್ದಲ್ಲ.

**xxxxx**

**5. ಆರ್ಥಿಕ ಪಾರದರ್ಶಕತೆಗಾಗಿ ಕ್ರಮಗಳು.**– (1) **xxxxx**

(2) ವಿಶೇಷವಾಗಿ ಮತ್ತು ಪೂರ್ವೋಕ್ತ ಉಪಬಂಧಗಳ ಸಾಮಾನ್ಯತೆಗೆ ಬಾಧಕವಾಗದಂತೆ, ರಾಜ್ಯಸರ್ಕಾರವು, ವಾರ್ಷಿಕ ಬಜೆಟ್‌ನ ಮಂಡನೆಯ ಸಮಯದಲ್ಲಿ, ನಿಯಮಿಸಬಹುದಾದಂತೆ ಅಂಥ ನಮೂನೆಯಲ್ಲಿನ ಒಂದು ಹೇಳಿಕೆಯಲ್ಲಿ ಈ ಮುಂದಿನವುಗಳನ್ನು ಬಹಿರಂಗಪಡಿಸತಕ್ಕದ್ದು–

(ಎ) ನಿಯಮಿಸಲಾದ ಆರ್ಥಿಕ ಸೂಚಿಗಳನ್ನು ಲೆಕ್ಕ ಇಡುವಲ್ಲಿ ಪರಿಣಾಮ ಬೀರುವ ಅಥವಾ ಪರಿಣಾಮ ಬೀರುವ ಸಂಭವವಿರುವ – ಲೆಕ್ಕ ತಯಾರಿಕೆ ಗುಣಮಟ್ಟಗಳು, ಕಾರ್ಯನೀತಿಗಳು ಮತ್ತು ಪದ್ಧತಿಗಳಲ್ಲಿ ಗಮನಾರ್ಹ ಬದಲಾವಣೆಗಳು;

(ಬಿ) ಕಾರ್ಯ ಸಾಧ್ಯವಾದಷ್ಟು ಮಟ್ಟಿಗೆ ಮತ್ತು ಸಾರ್ವಜನಿಕ ಹಿತಾಸಕ್ತಿಯ ರಕ್ಷಣೆಗೆ ಸುಸಂಗತವಾಗಿ, ಖಾತರಿಗಳ ಮೂಲಕ ಸೃಜಿಸಲಾದ ಸಾದಿಲ್ವಾರು ದಾಯಿತ್ವಗಳು, ಸಾರ್ವಜನಿಕ ವಲಯ ಉದ್ಯಮಗಳ ಹಾಗೂ ವಿಶೇಷ ಉದ್ದೇಶ ಘಟಕಗಳ (ಸ್ಪೆಷಲ್ ಪರ್ಪಸ್ ವೆಹಿಕಲ್ಸ್) ಮತ್ತು ಇತರ ಅಂಥಹವೇ ವಿಧಾನಗಳ ಮೂಲಕ ಮಾಡಲಾದ ಯಾವ ಸಾಲಗಳ ಮರುಸಂದಾಯದ ದಾಯಿತ್ವವು ಸರ್ಕಾರದ್ದಾಗಿದೆಯೋ ಅವುಗಳಿಂದ ಉಂಟಾಗುವ ವಾಸ್ತವಿಕ ಬಾಧ್ಯತೆಗಳು, ಪ್ರಸ್ತಾವಿಸಲಾದ ಆದರೆ ಹಣಹೊಂದಿಸಿಲ್ಲದ ರೆವಿನ್ಯೂ ಬೇಡಿಕೆಗಳು ಸೇರಿದಂತೆ ಸಂಭಾವ್ಯ ಬಜೆಟ್ ಇಂಗಿತಗಳನ್ನು ಹೊಂದಿರುವ ರಾಜ್ಯ ಸರ್ಕಾರವು ಮಾಡಿದ ಎಲ್ಲ ಕ್ಲೇಮುಗಳು ಮತ್ತು ಹೊಣೆಗಳು; ತೆರಿಗೆ ವೆಚ್ಚ; ಸೇವಾ ಸಂಸ್ಥೆಗಳು ಮತ್ತು ಉದ್ಯಮಗಳ ಮೂಲಕ ಸಾರ್ವಜನಿಕ ಸರಕುಗಳನ್ನು ಮತ್ತು ಸೇವೆಗಳನ್ನು ಒದಗಿಸುವಲ್ಲಿ ಭರಿಸಲಾದ ನಷ್ಟಗಳು ಹಾಗೂ ಬೃಹತ್ ಕಾಮಗಾರಿಗಳು ಮತ್ತು ಕರಾರುಗಳಿಗೆ ಸಂಬಂಧಪಟ್ಟಂತೆ ದಾಯಿತ್ವ ಹಾಗೂ ಸಹಾಯಧನ ಸಂದಾಯಗಳು; ಮತ್ತು 4ನೇ ಪ್ರಕರಣದ (3)ನೇ ಉಪ–ಪ್ರಕರಣದಲ್ಲಿ ಉಲ್ಲೇಖಿಸಿದ ಗುರಿಗಳು ಸೇರಿದಂತೆ ರಾಜ್ಯದ ಆರ್ಥಿಕ ಪರಿಸ್ಥಿತಿಯ ಮೇಲೆ ಅವುಗಳು ಬೀರುವ ಪರಿಣಾಮ.

**xxxxx**

**6. ಪಾಲನೆಯನ್ನು ಜಾರಿಗೊಳಿಸುವುದಕ್ಕೆ ಕ್ರಮಗಳು.**– (1) ವಾರ್ಷಿಕ ಬಜೆಟ್ ಮತ್ತು ಬಜೆಟ್ ಮಂಡನೆಯ ಸಮಯದಲ್ಲಿ ಪ್ರಕಟಿಸಲಾದ ಕಾರ್ಯನೀತಿಗಳು ಮುಂಬರುವ ಮತ್ತು ಭಾವೀ ವರ್ಷಗಳಿಗಾಗಿನ ಮಧ್ಯಕಾಲೀನ ಆರ್ಥಿಕ ಯೋಜನೆಯಲ್ಲಿ ನಿರ್ದಿಷ್ಟಪಡಿಸಿರುವ ಉದ್ದೇಶಗಳು ಮತ್ತು ಗುರಿಗಳಿಗೆ ಸುಸಂಗತವಾಗಿರತಕ್ಕದ್ದು.

(2) ಆರ್ಥಿಕ ಇಲಾಖೆಯ ಪ್ರಭಾರ ಹೊಂದಿರುವ ಸಚಿವರು, ಪ್ರತಿ ಆರು ತಿಂಗಳಿಗೊಮ್ಮೆ ಬಜೆಟ್‌ಗೆ ಸಂಬಂಧಪಟ್ಟಂತೆ ಸ್ವೀಕೃತಿಗಳು ಮತ್ತು ವೆಚ್ಚಗಳಲ್ಲಿನ ಪ್ರವೃತ್ತಿಗಳು, ಬಜೆಟ್ ಗುರಿಗಳನ್ನು ಸಾಧಿಸಲು ಕೈಗೊಳ್ಳಬೇಕಾದ ಪರಿಹಾರ ಕ್ರಮಗಳನ್ನು ಪರಿಶೀಲಿಸ ತಕ್ಕದ್ದು ಮತ್ತು ಅಂಥ ಪರಿಶೀಲನೆಯ

ಪರಿಣಾಮವನ್ನು ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು. ಪರಿಶೀಲನಾ ವರದಿಯು, ನಿಯಮಿಸಬಹುದಾದಂತೆ ಅಂಥ ನಮೂನೆಯಲ್ಲಿರತಕ್ಕದ್ದು.

**xxxxx**

**11. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ತೊಂದರೆಯನ್ನು ನಿವಾರಿಸಲು ಅವಶ್ಯವೆಂದು ಕಂಡು ಬರಬಹುದಾದಂತೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಲಾಗುವ ಆದೇಶದ ಮೂಲಕ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗಿರದ ಅಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಎರಡು ವರ್ಷಗಳು ಮುಕ್ತಾಯವಾದ ತರುವಾಯ ಈ ಪ್ರಕರಣದ ಅಡಿಯಲ್ಲಿ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.

**xxxxx**

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**NINTH SESSION**

**THE KARNATAKA FISCAL RESPONSIBILITY (AMENDMENT) BILL, 2011**

**(L.A. Bill No. 13 of 2011)**

A Bill further to amend the Karnataka Fiscal responsibility Act, 2002.

Whereas it is expedient further to amend the Karnataka Fiscal Responsibility Act, 2002 (Karnataka Act 16 of 2002) for the purposes hereinafter appearing;

Be it enacted by the Karnataka State Legislature in the sixty-second year of the Republic of India as follows:-

**1. Short title and commencement.-** (1) This Act may be called the Karnataka Fiscal Responsibility (Amendment) Act, 2011.

(2) It shall come into force at once.

**2. Amendment of section 4.-** In the Karnataka Fiscal Responsibility Act, 2002 (Karnataka Act 16 of 2002) (hereinafter referred to as the principal Act), in section 4, in sub-section (3),-

(i) after clause (f), the following shall be inserted, namely:-

"(g) ensure that the outstanding debt at the end of financial year 2010-11, 2011-12, 2012-13, 2013-14 and 2014-15 shall be at 26.2 percent, 26 percent, 25.7 percent, 25.4 percent and 25.2 percent respectively of the estimated Gross State Domestic Product for that year;"

(ii) after the third proviso, the following shall be inserted, namely:-

"Provided also that the fiscal deficit during the year 2010-11 may exceed the limit but not more than 3.44 percent of estimated Gross State Domestic Product as a part of counter recessionary measures. As a measure of compliance a report with details of measures taken and expenditure incurred thereby shall be placed before both Houses of the Legislature."

**3. Amendment of section 5.-** In section 5 of the principal Act, in sub-section (2), after clause (b), the following shall be inserted, namely:-

"(c) the tax expenditure and the method thereon explicitly; compliance costs of major tax proposal; Revenue Consequences of Capital Expenditure (RCCE) along with related liabilities; physical and financial assets; vacant public land and buildings; future expenditure commitments of major policy changes; liabilities explicit and implicit in public private partnership; and values of parameters underlying projections for receipts and expenditures and the band within which they can vary while remaining consistent with targets."

**4. Amendment of section 6.-** In section 6 of the principal Act, for sub-section (2), the following shall be substituted, namely:-

"(2) The State Government may, by notification, constitute a Fiscal Management Review Committee headed by the Chief Secretary to Government with other Secretaries to Government including the Principal Secretary or Secretary to Government in charge of Finance as members, as may be notified which shall meet at least twice a year to review fiscal and debt position of the State; and States progress on its fiscal correction path and to advice corrective measures as may be required. The procedure and modalities for review shall be such as may be prescribed.

(2A) The Minister in charge of finance shall review every half year the trends in receipt and expenditure in relation to the Budget, remedial measures to be taken to achieve budget targets as recommended by the Fiscal Management Review Committee and place before both the houses of Legislature the outcome of such reviews. The review report shall be in such form as may be prescribed."

**5. Amendment of section 11.-** In section 11 of the principal Act, in sub-section (1), for the proviso, the following shall be substituted, namely:-

"Provided that no order shall be made under this section after the expiry of two years from the date of commencement of the Karnataka Fiscal Responsibility (Amendment) Act, 2011."

## STATEMENT OF OBJECTS AND REASONS

It is considered necessary to amend the Karnataka Fiscal Responsibility Act, 2002 to implement the measures prescribed by the Government of India based on the recommendation of XIII Finance Commission as a condition precedent to release specific grants and debt relief measures to the State.

Hence, the Bill.

## FINANCIAL MEMORANDUM

There will be no extra expenditure involved in the proposed legislative measure.

### MEMORANDUM REGARDING DELEGATED LEGISLATION

**Clause 4:** (i) Sub-section (2) of section 6 sought to be inserted, empowers the State Government to make rules regarding the procedure and modalities for review by the Fiscal Management Review Committee.

(ii) Sub-section (2A) of section 6 sought to be inserted, empowers the State Government to make rules regarding the form in which review report of the Fiscal Management Review committee shall be, to be laid before both the houses of legislature.

**B.S. YEDDYURAPPA**
Chief Minister and
Minister for Finance

**S.B. PATIL**
Secretary
Karnataka Legislative Assembly

## ANNEXURE

### Extract from the Karnataka Fiscal Responsibility Act, 2002 (Karnataka Act No. 16 of 2002)

**XX** **XX** **XX**

**4. Fiscal Management Principles.-** **XX** **XX** **XX**

(3) In particular, and without prejudice to the generality of the foregoing provisions, the State Government shall –

(a) XX XX XX

| | | | |
|---|---|---|---|
| (b) | XX | XX | XX |
| (c) | XX | XX | XX |
| (d) | XX | XX | XX |
| (e) | XX | XX | XX |
| (f) | XX | XX | XX |

Provided that revenue deficit and fiscal deficit may exceed the limits specified under this sub-section due to ground or grounds of unforeseen demands on the finances of the State Government due to national security or natural calamity, subject to the condition that the excess beyond limits arising due to natural calamities does not exceed the actual fiscal cost that can be attributed to the calamities;

Provided further that the fiscal deficit during the year 2008-09 may exceed the limit up to 3.5 percent of estimated Gross State Domestic Product as a part of economic stimulus package. The additional market borrowings availed under the limits so relaxed shall be used for undertaking capital expenditure during the year 2008-09. As a measure of compliance an accompanying Report with details and stating the likely impact of such capital expenditure shall be placed before both the Houses of the Legislature.

Provided also that the fiscal deficit during the financial year 2009-10 shall not exceed four percent of estimated Gross State Domestic Product. maintained;

**XX** **XX** **XX**

Provided further that the ground or grounds specified in the first proviso shall be placed before the House of Legislature, as soon as may be, after it becomes likely that such deficit amount may exceed the aforesaid limits, with an accompanying report stating the likely extent of excess, and reasons therefor.

**XX** **XX** **XX**

(2) In particular, and without prejudice to the generality of the foregoing provision, the State Government shall, at the time of presentation of the annual budget, disclose in a statement in the form as may be prescribed, -

(a) the significant changes in the accounting standards, policies and practices affecting or likely to affect the computation of prescribed fiscal indicators;

(b) as far as practicable, and consistent with protection of public interest, the contingent liabilities created by way of guarantees; the actual liabilities arising out of borrowings by Public Sector Undertakings and Special Purpose Vehicles and other equivalent instruments where liability for repayment is on the State Government; all claims and commitments made by the State Government having potential budgetary implications, including revenue demands raised but not realised; tax expenditure; losses incurred in providing public goods and services through public utilities and undertakings; liability in respect of major works and contracts; and subsidy payments and the impact of the same on the fiscal position of the State including in relation to the targets referred to in sub-section (3) of Section 4.

**XX** **XX** **XX**

(2) The Minister in charge of the Department of Finance, shall review, every half year, the trends in receipts and expenditure in relation to the budget, remedial measures to be taken to achieve the budget targets and place before both the Houses of Legislature the outcome of such reviews. The review report shall be in such form as may be prescribed.

**XX** **XX** **XX**

**11. Power to remove difficulties.-** (1) If any difficulty arises in giving effect to the provisions of this Act, the State Government may, by order published in the Official Gazette, make such provisions not inconsistent with the provisions of this Act as may appear to be necessary for removing the difficulty:

Provided that no order shall be made under this section after the expiry of two years from the commencement of this Act.

**XX** **XX** **XX**

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಮಾರ್ಚ್ ೯, ೨೦೧೧ (ಫಾಲ್ಗುಣ ೧೮, ಶಕ ವರ್ಷ ೧೯೩೨) | ನಂ. ೨೯೨ |
|---|---|---|


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/14/Bill/2011, Bangalore, Dated: 9th March, 2011**

The following Bill was introduced in Legislative Assembly on 9.3.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಒಂಭತ್ತನೇ ಅಧಿವೇಶನ**

## ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ವಿಧೇಯಕ, 2011
## (2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 14)

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು (2004ರ ಕರ್ನಾಟಕ ಅಧಿನಿಯಮ 32) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು 2011ರ ಏಪ್ರಿಲ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **4ನೇ ಪ್ರಕರಣದ ತಿದ್ದುಪಡಿ.**– ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 4ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ,–

(i) (ಎ) ಖಂಡದಲ್ಲಿ (ii)ನೇ ಉಪಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ii) ಮೂರನೇ ಅನುಸೂಚಿಯಲ್ಲಿ ನಮೂದಿಸಿದ ಸರಕುಗಳ ಸಂಬಂಧದಲ್ಲಿ ಶೇಕಡಾ ಐದರ ದರದಲ್ಲಿ, ಮತ್ತು";

(ii) (ಬಿ)ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಬಿ) ಈ ಮುಂದಿನವುಗಳ ಸಂಬಂಧದಲ್ಲಿ, ಎಂದರೆ:–

(i) ಕೇಂದ್ರ ಮಾರಾಟ ತೆರಿಗೆ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ 74) 14ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದಂತೆ ಘೋಷಿಸಲಾದ ಸರಕುಗಳ ಸಂಬಂಧದಲ್ಲಿ ಸದರಿ ಅಧಿನಿಯಮದ 15ನೇ ಪ್ರಕರಣದ ಅಡಿಯಲ್ಲಿ ಅಂಥ ಸರಕುಗಳಿಗೆ ನಿರ್ದಿಷ್ಟಪಡಿಸಿದ ಗರಿಷ್ಠ ದರದಲ್ಲಿ;

(ii) ಸಿಗರೇಟುಗಳು, ಸಿಗಾರ್‌ಗಳು, ಗುಟ್ಕಾ ಮತ್ತು ಇತರ ತಂಬಾಕು ತಯಾರಿಕೆಗಳ ಸಂಬಂಧದಲ್ಲಿ ಶೇಕಡಾ ಹದಿನೈದರ ದರದಲ್ಲಿ;

(iii) ಇತರ ಸರಕುಗಳ ಸಂಬಂಧದಲ್ಲಿ ಶೇಕಡಾ ಹದಿನಾಲ್ಕರ ದರದಲ್ಲಿ,"

3. **21ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 21ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**21. ತೆರಿಗೆಯ ಮರುಪಾವತಿ.**– ವಿಶ್ವಸಂಸ್ಥೆಯ ವಿಶೇಷ ಏಜೆನ್ಸಿಗಳು, ವಿಶ್ವಸಂಸ್ಥೆಗಳ (ವಿಶೇಷ ಹಕ್ಕುಗಳು ಮತ್ತು ರಕ್ಷಣೆಗಳು) ಅಧಿನಿಯಮ, 1947ರ (1947ರ ಕೇಂದ್ರ ಅಧಿನಿಯಮ 46) ಅಡಿಯಲ್ಲಿ ಅಧಿಸೂಚಿಸಲ್ಪಟ್ಟ ಬಹುಮುಖ ಆರ್ಥಿಕ ಸಂಘಗಳು ಮತ್ತು ಸಂಸ್ಥೆಗಳು ಹಾಗೂ ಅಧಿಸೂಚಿಸಬಹುದಾದಂಥ ವಾಣಿಜ್ಯದೌತ್ಯ ಕಛೇರಿಗಳು ಅಥವಾ ರಾಯಭಾರಿ ಕಛೇರಿಗಳನ್ನು ಹೊರತುಪಡಿಸಿದಂತೆ ಇತರ ದೇಶಗಳ ವಾಣಿಜ್ಯದೌತ್ಯ

ಕಛೇರಿಗಳು ಮತ್ತು ರಾಯಭಾರಿ ಕಛೇರಿಗಳಿಂದ ಮಾಡಿದ, ನಿಯಮಿಸಬಹುದಾದ ವರ್ಗದ ಖರೀದಿಗಳ ಮೇಲೆ, ಈ ಅಧಿನಿಯಮದಡಿಯಲ್ಲಿ ಸಂಗ್ರಹಿಸಿದ ತೆರಿಗೆಯನ್ನು ನಿಯಮಿಸಬಹುದಾದಂಥ ವಿಧಾನ ಮತ್ತು ಷರತ್ತುಗಳಿಗೆ ಒಳಪಟ್ಟು ಮರುಪಾವತಿ ಮಾಡತಕ್ಕದ್ದು."

**4. 25ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 25ನೇ ಪ್ರಕರಣದ (1)ನೇ ಉಪಪ್ರಕರಣದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಅರ್ಜಿಯನ್ನು ವಿದ್ಯುನ್ಮಾನದ ಮೂಲಕ ಸಲ್ಲಿಸಬೇಕಾದ ವೆಬ್‌ಸೈಟನ್ನು ಆಯುಕ್ತನು ಅಧಿಸೂಚಿಸಬಹುದು."

**5. 31ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 31ನೇ ಪ್ರಕರಣದಲ್ಲಿ,–

(i) (4)ನೇ ಉಪಪ್ರಕರಣದಲ್ಲಿ "ಅರವತ್ತು ಲಕ್ಷ ರೂಪಾಯಿಗಳನ್ನು" ಎಂಬ ಪದಗಳಿಗೆ "ಒಂದು ನೂರು ಲಕ್ಷ ರೂಪಾಯಿಗಳನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) (6)ನೇ ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**6. 37ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 37ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ "ಶೇಕಡಾ ಒಂದೂಕಾಲು" ಎಂಬ ಪದಗಳಿಗೆ "ಶೇಕಡಾ ಒಂದೂವರೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**7. 40ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 40ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ,–

(ಎ) (ಎ)ಖಂಡದಲ್ಲಿ "ಐದು ವರ್ಷಗಳು" ಎಂಬ ಪದಗಳಿಗೆ "ನಾಲ್ಕು ವರ್ಷಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) ಈ ಮುಂದಿನ ಪರಂತುಕವನ್ನು ಕೊನೆಯಲ್ಲಿ ಸೇರಿಸತಕ್ಕದು, ಎಂದರೆ:–

"ಪರಂತು, 2007ರ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಯಾವುದೇ ತೆರಿಗೆಯ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆಯ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆಯ ಅವಧಿಯು ಕೊನೆಗೊಂಡ ತರುವಾಯ ಐದು ವರ್ಷಗಳ ಅವಧಿಯೊಳಗೆ ಮಾಡತಕ್ಕದ್ದು."

(ii) (2)ನೇ ಉಪಪ್ರಕರಣದಲ್ಲಿ "ಐದು ವರ್ಷಗಳಿಗೆ ಎಂಬುದನ್ನು ಹತ್ತು ವರ್ಷಗಳಿಗೆ ಎಂದು ಉಲ್ಲೇಖಿಸಿದ್ದರೆ" ಎಂಬ ಪದಗಳಿಗೆ "ನಾಲ್ಕು ವರ್ಷಗಳಿಗೆ ಎಂಬುದನ್ನು ಎಂಟು ವರ್ಷಗಳಿಗೆ ಎಂದು ಉಲ್ಲೇಖಿಸಿದ್ದರೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**8. 53ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 53ನೇ ಪ್ರಕರಣದ (12)ನೇ ಉಪಪ್ರಕರಣದಲ್ಲಿ, (ಎ)ಖಂಡದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ವಿಧಿಸಬಹುದಾದ ತೆರಿಗೆಯ ದರವು ಶೇಕಡಾ ನಾಲ್ಕಕ್ಕಿಂತ ಕಡಿಮೆ ಇರುವ ಯಾವುದೇ ಸರಕುಗಳ ಸಂಬಂಧದಲ್ಲಿ (ii) ನೇ ಉಪಖಂಡದ ಅಡಿಯಲ್ಲಿ ವಿಧಿಸಬಹುದಾದ ದಂಡವು, ವಿಧಿಸಬಹುದಾದ ತೆರಿಗೆಯ ಮೊಬಲಗಿನ ಐದರಷ್ಟಕ್ಕೆ ಸಮನಾಗಿರತಕ್ಕದ್ದು."

**9. 54ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 54ನೇ ಪ್ರಕರಣದ (1)ನೇ ಉಪಪ್ರಕರಣದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ವಾಹನದ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ಯಾವೊಬ್ಬ ಇತರ ವ್ಯಕ್ತಿಯು ಸಲ್ಲಿಸಬೇಕಾದ ಅವಶ್ಯಕ ಮಾಹಿತಿಯನ್ನು ಸಲ್ಲಿಸಬೇಕಾದ ವೆಬ್‌ಸೈಟನ್ನು ಆಯುಕ್ತನು ಅಧಿಸೂಚಿಸಬಹುದು."

**10. 62ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 62ನೇ ಪ್ರಕರಣದ (4)ನೇ ಉಪಪ್ರಕರಣದ (ಡಿ)ಖಂಡದಲ್ಲಿ "ಒಂದುನೂರ ಇಪ್ಪತ್ತು ದಿನಗಳ" ಎಂಬ ಪದಗಳಿಗೆ "ಎರಡುನೂರ ನಲವತ್ತು ದಿನಗಳ"ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**11. ಎರಡನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಎರಡನೇ ಅನುಸೂಚಿಯಲ್ಲಿ ಕ್ರಮ ಸಂಖ್ಯೆ 2 ಮತ್ತು 3ಕ್ಕೆ ಸಂಬಂಧಿಸಿದ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು.

**12. ಮೂರನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಮೂರನೇ ಅನುಸೂಚಿಯಲ್ಲಿ,–

(i) ಕ್ರಮ ಸಂಖ್ಯೆ 5ಕ್ಕೆ ಸಂಬಂಧಿಸಿದ ನಮೂದುಗಳಲ್ಲಿ "ಅಡಿಗೆ ತಯಾರಿಸಲು ಉಪಯೋಗಿಸುವ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ii) ಕ್ರಮ ಸಂಖ್ಯೆ 30ಕ್ಕೆ ಸಂಬಂಧಿಸಿದ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು.

**13. ಆರನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಆರನೇ ಅನುಸೂಚಿಯಲ್ಲಿ,–

(i) ಕ್ರಮ ಸಂಖ್ಯೆ 7ಕ್ಕೆ ಸಂಬಂಧಿಸಿದ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು.

(ii) ಕ್ರಮ ಸಂಖ್ಯೆ 12ಕ್ಕೆ ಸಂಬಂಧಿಸಿದ ನಮೂದುಗಳಲ್ಲಿ, 3ನೇ ಅಂಕಣದಲ್ಲಿ "ಶೇಕಡಾ ನಾಲ್ಕು" ಎಂಬ ಪದಗಳಿಗೆ "ಕೇಂದ್ರ ಮಾರಾಟ ತೆರಿಗೆ ಅಧಿನಿಯಮ, 1956ರ(1956ರ ಕೇಂದ್ರ ಅಧಿನಿಯಮ 74) 15ನೇ ಪ್ರಕರಣದಲ್ಲಿ ಘೋಷಿಸಲಾದ ಸರಕುಗಳಿಗೆ ನಿರ್ದಿಷ್ಟಪಡಿಸಿದಂಥ ಗರಿಷ್ಠ ದರದಲ್ಲಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(iii) ಕ್ರಮ ಸಂಖ್ಯೆ 23ಕ್ಕೆ ಸಂಬಂಧಿಸಿದ ನಮೂದುಗಳಲ್ಲಿ, 3ನೇ ಅಂಕಣದಲ್ಲಿ "ಶೇಕಡಾ ಹದಿಮೂರುವರೆ" ಎಂಬ ಪದಗಳಿಗೆ "ಶೇಕಡಾ ಹದಿನಾಲ್ಕು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಆಯವ್ಯಯದಲ್ಲಿ ಮಾಡಲಾದ ಪ್ರಸ್ತಾವಗಳನ್ನು ಜಾರಿಗೊಳಿಸುವುದಕ್ಕಾಗಿ ಮತ್ತು ಅದಕ್ಕೆ ಸಂಬಂಧಿಸಿದ ವಿಷಯಗಳಿಗಾಗಿ ಹಾಗೂ ಅದರಲ್ಲೂ ನಿರ್ದಿಷ್ಟವಾಗಿ ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ,-

(i) ನೋಂದಣಿ ಮಾಡಿಕೊಡುವ ಕಾರ್ಯ ವಿಧಾನವು ಸರಳ ಮತ್ತು ಸುಲಭವಾಗಿರುವಂತೆ ಮಾಡಲು, ವ್ಯಾಪಾರಿಯು ಯಾವ ವೆಬ್‌ಸೈಟ್‌ನಲ್ಲಿ ನೋಂದಣಿಗಾಗಿ ಅರ್ಜಿಯನ್ನು ಸಲ್ಲಿಸಬಹುದೋ ಆ ವೆಬ್‌ಸೈಟ್‌ನ್ನು ಅಧಿಸೂಚಿಸುವ;

(ii) ಸಾಗಣೆ ಪಾಸಿನ ನೀಡಿಕೆಯನ್ನು ಸುಲಭವಾಗುವಂತೆ ಮಾಡಲು ಮತ್ತು ನಿಯಮ ಪಾಲಿಸದಿರುವುದನ್ನು ಸುಲಭವಾಗಿ ಪತ್ತೆ ಮಾಡುವಂತಾಗಲು ರಾಜ್ಯದ ಮೂಲಕ ರಸ್ತೆ ಮಾರ್ಗವಾಗಿ ಸಾಗಣೆಯಾಗುವ ಸರಕುಗಳಿಗೆ ಸಂಬಂಧಪಟ್ಟ ಮಾಹಿತಿಯನ್ನು ಯಾವ ವೆಬ್‌ಸೈಟ್‌ನಲ್ಲಿ ಒದಗಿಸಬಹುದೋ ಆ ವೈಬ್‌ಸೈಟ್‌ನ್ನು ಅಧಿಸೂಚಿಸುವ.

– ಅಧಿಕಾರ ನೀಡಲು ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003 ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಕೆಲವು ಆನುಷಂಗಿಕ ಮತ್ತು ಪ್ರಾಸಂಗಿಕ ತಿದ್ದುಪಡಿಗಳನ್ನು ಮಾಡಲು ಹಾಗೂ ಚಾಲ್ತಿಯಲ್ಲಿರುವ ಕೆಲವು ಉಪಬಂಧಗಳನ್ನು ತರ್ಕಬದ್ಧಗೊಳಿಸುವ ಇತರ ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

## ಪ್ರತ್ಯಾಯೋಜಿತ ಶಾಸನ ರಚನೆಗೆ ಸಂಬಂಧಿಸಿದ ಜ್ಞಾಪನ ಪತ್ರ

ಖಂಡ 3: 3ನೇ ಖಂಡದ ಅಡಿಯಲ್ಲಿ ಪ್ರತಿಯೋಜಿಸಲು ಉದ್ದೇಶಿಸಿರುವ 21ನೇ ಪ್ರಕರಣವು, ನಿರ್ದಿಷ್ಟಪಡಿಸಲಾದ ಏಜೆನ್ಸಿಗಳು ಖರೀದಿಸಿದ ಯಾವ ಸರಕುಗಳ ವರ್ಗದ ಮೇಲೆ ಸಂದಾಯ ಮಾಡಿದ ತೆರಿಗೆಯನ್ನು ಮರುಪಾವತಿಸುವ ಸೌಲಭ್ಯವನ್ನು ಬಳಸಿಕೊಳ್ಳಬಹುದೇ ಆ ಸರಕುಗಳ ವರ್ಗವನ್ನು ನಿಯಮಿಸಲು ನಿಯಮಗಳನ್ನು ರಚಿಸಲು ಮತ್ತು ಖರೀದಿಗಳ ಮೇಲೆ ತೆರಿಗೆಯನ್ನು ಹಾಗೆ ಮರುಪಾವತಿಸಲು ಕ್ಲೇಮು ಮಾಡುವ ವಿಧಾನವನ್ನು ಮತ್ತು ಷರತ್ತುಗಳನ್ನು ನಿಯಮಿಸಲು ನಿಯಮಗಳನ್ನು ರಚಿಸಲು ಮತ್ತು ತಮ್ಮ ಸರಕುಗಳ ಖರೀದಿಯ ಮೇಲೆ ಸಂದಾಯ ಮಾಡಿದ ತೆರಿಗೆಯನ್ನು ಮರುಪಾವತಿಗೆ ಅರ್ಹರಾಗಿಲ್ಲದ ದೇಶಗಳ ವಾಣಿಜ್ಯದೌತ್ಯ ಕಚೇರಿಗಳನ್ನು ಮತ್ತು ರಾಯಭಾರಿ ಕಛೇರಿಗಳನ್ನು ಸಹ ಅಧಿಸೂಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯ ಸಾಮಾನ್ಯ ಸ್ವರೂಪದ್ದಾಗಿದೆ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು ಮತ್ತು ಆರ್ಥಿಕ ಸಚಿವರು

**ಎಸ್.ಬಿ.ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

## ಅನುಬಂಧ

### ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32) ಉದ್ಧೃತ ಭಾಗ

**XXXXX**

**4. ತೆರಿಗೆ ಬದ್ಧತೆ ಮತ್ತು ಅದರ ದರಗಳು.**- (1) 22 ಮತ್ತು 24ನೇ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿದಂತೆ ನೋಂದಾಯಿತನಾದ ಅಥವಾ ನೋಂದಾಯಿತನಾಗಲು ಅಗತ್ಯಪಡಿಸಲಾದ ಪ್ರತಿಯೊಬ್ಬ ವ್ಯಾಪಾರಿಯು ತನ್ನ ತೆರಿಗೆಗೆ ಗುರಿಯಾಗತಕ್ಕ ವಹಿವಾಟಿನ ಮೇಲೆ,

(ಎ) ಈ ಮುಂದಿನಂತೆ ಎಂದರೆ,-

(i) ಎರಡನೇ ಅನುಸೂಚಿಯಲ್ಲಿ ನಮೂದಿಸಿದ ಸರಕುಗಳ ಸಂಬಂಧದಲ್ಲಿ ಶೇಕಡಾ ಒಂದರ ದರದಲ್ಲಿ,

(ii) ಮೂರನೇ ಅನುಸೂಚಿಯಲ್ಲಿ ನಮೂದಿಸಿದ ಸರಕುಗಳ ಸಂಬಂಧದಲ್ಲಿ 30ನೇ ಕ್ರಮಸಂಖ್ಯೆಯಲ್ಲಿ ನಿರ್ದಿಷ್ಟಪಡಿಸಿದ ಸರಕುಗಳ ಸಂಬಂಧದಲ್ಲಿ ಶೇಕಡಾ ನಾಲ್ಕರ ಮತ್ತು ಇತರ ಸರಕುಗಳ ಸಂಬಂಧದಲ್ಲಿ ಶೇಕಡಾ ಐದರ ದರದಲ್ಲಿ, ಮತ್ತು

(iii) ನಾಲ್ಕನೇ ಅನುಸೂಚಿಯಲ್ಲಿ ನಮೂದಿಸಿದ ಸರಕುಗಳ ಸಂಬಂಧದಲ್ಲಿ ಶೇಕಡಾ ಇಪ್ಪತ್ತರ ದರದಲ್ಲಿ,

(ಬಿ) (i) ಸಿಗರೇಟುಗಳು, ಸಿಗಾರುಗಳು, ಗುಟ್ಕಾ ಮತ್ತು ಇತರ ತಂಬಾಕು ತಯಾರಿಕೆಗಳ ಸಂಬಂಧದಲ್ಲಿ ಶೇಕಡಾ ಹದಿನೈದರ ದರದಲ್ಲಿ;

(ii) ಇತರ ಸರಕುಗಳ ಸಂಬಂಧದಲ್ಲಿ ಶೇಕಡಾ ಹದಿಮೂರುವರೆ ದರದಲ್ಲಿ,

- ತೆರಿಗೆಯನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು.

**X X X X X**

**21. ತೆರಿಗೆಯನ್ನು ಮರುಪಾವತಿಸುವುದು.**- ವಿಶ್ವ ಸಂಸ್ಥೆ ಮತ್ತು ಯಾವುವೇ ಇತರ ದೇಶಗಳ ಕೌನ್ಸೆಲ್ ಕಚೇರಿಗಳ ಅಥವಾ ಎಂಬೆಸಿಗಳ, ಆದರೆ ಅಧಿಸೂಚಿಸಬಹುದಾದಂತೆ ಕಾನ್ಸುಲೇಟ್‌ಗಳ ಅಥವಾ ಅಂಥ ದೇಶಗಳ ಎಂಬೆಸಿಗಳನ್ನು ಹೊರತುಪಡಿಸಿ, ಪರಿಣಿತ ಏಜೆನ್ಸಿಗಳಿಂದ ಮಾಡಿದ ಖರೀದಿಗಳ ಮೇಲೆ ಈ ಅಧಿನಿಯಮದ ಅಡಿಯಲ್ಲಿ ಸಂಗ್ರಹಿಸಿದ ತೆರಿಗೆಯನ್ನು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ಮರುಪಾವತಿ ಮಾಡತಕ್ಕದ್ದು.

**X X X X X**

**25. ನೋಂದಣಿ.**- (1) 22 ಅಥವಾ 23ನೇ ಪ್ರಕರಣದ ಅಡಿಯಲ್ಲಿ ನೋಂದಣಿ ಮಾಡಿಸಲು ಅರ್ಜಿ ನಮೂನೆ, ಅರ್ಜಿಯನ್ನು ಸಲ್ಲಿಸಲು ಸಮಯ ಮತ್ತು ವಿಧಾನವನ್ನು ಹಾಗೂ ಸಂದಾಯ ಮಾಡಬೇಕಾದ ಶುಲ್ಕ ಇವುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

**XXXXX**

**31. ಲೆಕ್ಕ ಪತ್ರಗಳು.**- (1) ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು ಮತ್ತು ಈ ಅಧಿನಿಯಮದ ಅಡಿಯಲ್ಲಿ ತೆರಿಗೆ ಸಂದಾಯ ಮಾಡಲು ಬದ್ಧನಾದ ಪ್ರತಿಯೊಬ್ಬ ವ್ಯಾಪಾರಿಯು, ಸಂದಾಯ ಮಾಡಿದ ಹೂಡುವಳಿ ತೆರಿಗೆ ಮತ್ತು ಸಂದಾಯ ಮಾಡಬೇಕಾದ ಹುಟ್ಟುವಳಿ ತೆರಿಗೆಯೂ ಸೇರಿದಂತೆ ಈ ಅಧಿನಿಯಮದ ಅಡಿಯಲ್ಲಿ ತೆರಿಗೆಯ ಪ್ರತಿಯೊಂದು ದರಕ್ಕೆ ಒಳಪಟ್ಟ ಸರಕುಗಳ ಮೌಲ್ಯಗಳನ್ನು ತೋರಿಸುವ ತನ್ನ ಎಲ್ಲಾ ಖರೀದಿಗಳ, ಸ್ವೀಕೃತಿಗಳ, ಮಾರಾಟಗಳ, ಇತರ ವಿಲೆಗಳ, ಉತ್ಪಾದನೆಯ, ತಯಾರಿಕೆಯ ಮತ್ತು ದಾಸ್ತಾನಿನ ನಿಜವಾದ ಮತ್ತು ಸರಿಯಾದ ಲೆಕ್ಕ ಪತ್ರಗಳನ್ನು ಕನ್ನಡ ಅಥವಾ ಇಂಗ್ಲೀಷ್ ಅಥವಾ ಹಿಂದಿ ಅಥವಾ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಅಂಥ ಇತರ ಭಾಷೆಯಲ್ಲಿ ಇಡತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

**XXXXX**

(4) ಯಾರ ಒಟ್ಟು ವಹಿವಾಟು ಒಂದು ವರ್ಷದಲ್ಲಿ ಅರವತ್ತು ಲಕ್ಷ ರೂಪಾಯಿಗಳನ್ನು ಮೀರುವುದೋ, ಆ ಪ್ರತಿಯೊಬ್ಬ ವ್ಯಾಪಾರಿಯು, ತನ್ನ ಲೆಕ್ಕಪತ್ರಗಳನ್ನು ನಿಯಮಿಸಬಹುದಾದಂಥ ಷರತ್ತುಗಳಿಗೆ ಮತ್ತು ಅಂಥ ಮಿತಿಗಳಿಗೆ ಒಳಪಟ್ಟು ಒಬ್ಬ ಚಾರ್ಟೆಡ್ ಅಕೌಂಟೆಂಟ್ ಅಥವಾ ಕಾಸ್ಟ್ ಅಕೌಂಟೆಂಟ್ ಅಥವಾ ಒಬ್ಬ ತೆರಿಗೆ ವೃತ್ತಿದಾರನಿಂದ ಪರಿಶೋಧಿಸತಕ್ಕದ್ದು ಮತ್ತು ಪರಿಶೋಧಿತ ಲೆಕ್ಕಪತ್ರಗಳ ವಿವರಣ ಪಟ್ಟಿಯ ಒಂದು ಪ್ರತಿಯನ್ನು ಮತ್ತು ನಿಯಮಿಸಲಾದ ದಸ್ತಾವೇಜುಗಳನ್ನು, ನಿಯಮಿಸಲಾದ ರೀತಿಯಲ್ಲಿ ನಿಯಮಿಸಲಾದ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

ಪರಂತು, 2010ರ ಮಾರ್ಚ್ 31ನೇ ದಿನಾಂಕದಂದು ಕೊನೆಗೊಳ್ಳುವ ವರ್ಷದಲ್ಲಿ ಒಟ್ಟು ವಹಿವಾಟು ನಲವತ್ತು ಲಕ್ಷ ರೂಪಾಯಿಗಳನ್ನು ಮೀರುವ ಪ್ರತಿಯೊಬ್ಬ ವ್ಯಾಪಾರಿಯು ತನ್ನ ಲೆಕ್ಕಪತ್ರಗಳನ್ನು ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

**XXXXX**

(6) ತಾನಾಗಿಯೇ ಅಥವಾ ಇನ್ನೊಬ್ಬರ ಮೂಲಕ ಒಂದು ಕಟ್ಟಡವನ್ನು ಕಟ್ಟುವ ಅಥವಾ ಇತರ ಸಿವಿಲ್ ಕಾಮಗಾರಿಯನ್ನು ನಿರ್ವಹಿಸುವ ಕಾಮಗಾರಿ ಕರಾರನ್ನು ಪೂರ್ಣವಾಗಿ ಅಥವಾ ಭಾಗಶಃ ಯಾವುದೇ ತೆರಿಗೆ ಅವಧಿಯಲ್ಲಿ ನಿರ್ವಹಿಸಿಕೊಡುವಂಥ ಲಿಖಿತ ಒಪ್ಪಂದವನ್ನು ಮಾಡಿಕೊಂಡ ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿ ಅಥವಾ ಭೂಮಾಲೀಕನು ಸೇರಿದಂತೆ ಈ ಅಧಿನಿಯಮದಲ್ಲಿ ನೋಂದಾಯಿಸಿಕೊಳ್ಳಲು ಬದ್ಧನಾದ ಪ್ರತಿಯೊಬ್ಬ

ವ್ಯಾಪಾರಿಯು ಅಂಥ ಒಪ್ಪಂದದ ಪ್ರತಿಯನ್ನು ತಾನು ಯಾರಿಗೆ ತೆರಿಗೆ ವಿವರಪಟ್ಟಿಯನ್ನು ಸಲ್ಲಿಸಲು ಅಗತ್ಯಪಡಿಸಲಾಗಿದೆಯೋ ಆ ನಿಯಮಿತ ಪ್ರಾಧಿಕಾರಿಗೆ, ತರುವಾಯದಲ್ಲಿ ಬರುವ ತೆರಿಗೆ ಅವಧಿಯು ಮುಕ್ತಾಯಗೊಳ್ಳುವುದರೊಳಗೆ, ಸಲ್ಲಿಸತಕ್ಕದ್ದು.

**XXXXX**

**37. ಬಡ್ಡಿಯ ದರ.–** (1) ಈ ಮುಂದಿನ ಸಂದರ್ಭಗಳಲ್ಲಿ 36ನೇ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ಸರಳ ಬಡ್ಡಿಯ ದರವು ತಿಂಗಳಿಗೆ ಶೇಕಡಾ ಒಂದೂಕಾಲು ಆಗಿರತಕ್ಕದ್ದು.

(ಎ) ತೆರಿಗೆಯನ್ನು ಸಂದಾಯಮಾಡಬೇಕಾಗಿದ್ದ ದಿನಾಂಕದಿಂದ ಅದನ್ನು ಸಂದಾಯ ಮಾಡುವ ದಿನಾಂಕದವರೆಗೆ ಅಥವಾ ಈ ಅಧಿನಿಯಮದ ಅಡಿಯಲ್ಲಿ ಯಾವುದೇ ತೆರಿಗೆ ನಿರ್ಧರಣೆಯ ದಿನಾಂಕದವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ; ಮತ್ತು

(ಬಿ) ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡಬೇಕಾದ ಯಾವುದೇ ಮೊಬಲಗು ಯಾವ ದಿನಾಂಕದಿಂದ ಬಾಕಿ ಉಳಿದಿತ್ತೋ ಆ ದಿನಾಂಕದಿಂದ;

**XXXXX**

**40. ತೆರಿಗೆ ನಿರ್ಧರಣೆಗಾಗಿ ಕಾಲಮಿತಿ.–** (1) ಯಾವುದೇ ನಿಯಮಿಸಲಾದ ತೆರಿಗೆ ಅವಧಿಗಾಗಿ ಬಾಕಿ ತೆರಿಗೆಯ ಮೊಬಲಗಿನ ಸಂಬಂಧದಲ್ಲಿ 38ನೇ ಪ್ರಕರಣದ ಅಡಿಯಲ್ಲಿ ತೆರಿಗೆ ನಿರ್ಧರಣೆಯನ್ನು ಅಥವಾ 39ನೇ ಪ್ರಕರಣದ ಅಡಿಯಲ್ಲಿ ತೆರಿಗೆಯ ಮರು ನಿರ್ಧರಣೆಯನ್ನು ಈ ಮುಂದಿನ ಕಾಲಮಿತಿಯ ತರುವಾಯ ಮಾಡತಕ್ಕದ್ದಲ್ಲ, ಎಂದರೆ:–

(ಎ) ನಿಯಮಿಸಲಾದ ತೆರಿಗೆ ಅವಧಿಯ ಮುಕ್ತಾಯದ ತರುವಾಯದ ಐದು ವರ್ಷಗಳು; ಅಥವಾ

(ಬಿ) ನಿಯಮಿಸಲಾದ ಪ್ರಾಧಿಕಾರದ ಅಭಿಪ್ರಾಯದಲ್ಲಿ, ತೆರಿಗೆಯ ಮರು ನಿರ್ಧರಣೆ ಮಾಡುವುದನ್ನು ಸಮರ್ಥಿಸುವ ಸಂಗತಿಗಳ ಸಾಕ್ಷ್ಯವು ಸಾಕಷ್ಟಿದೆ ಎಂದು ಅದರ ಗಮನಕ್ಕೆ ಬಂದ ತರುವಾಯ ಮೂರು ವರ್ಷಗಳು;

– ಇವುಗಳಲ್ಲಿ ಯಾವುದು ನಂತರದ್ದೋ ಅದು.

(3) ನೋಂದಾಯಿತನಾಗಲು ಬದ್ಧನಾಗಿದ್ದಾಗ್ಯೂ ಹಾಗೆ ಮಾಡಲು ತಪ್ಪಿದ ಒಬ್ಬ ವ್ಯಾಪಾರಿಯು ಯಾವುದೇ ತೆರಿಗೆ ಸಂದಾಯಮಾಡಲು ತಪ್ಪಿದರೆ ಅಥವಾ 79ನೇ ಪ್ರಕರಣದ ಅಡಿಯಲ್ಲಿ ಶಿಕ್ಷೆಗೆ ಗುರಿಯಾಗುವುದನ್ನು ಮೋಸದಿಂದ ತಪ್ಪಿಸಿಕೊಂಡರೆ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಐದು ವರ್ಷಗಳಿಗೆ ಎಂಬುದನ್ನು ಹತ್ತು ವರ್ಷಗಳಿಗೆ ಎಂದು ಉಲ್ಲೇಖಿಸಿದ್ದರೆ ಹೇಗೋ ಹಾಗೆ ತೆರಿಗೆ ನಿರ್ಧರಣೆಯನ್ನು ಮಾಡಬಹುದು ಅಥವಾ ಮರು ನಿರ್ಧರಣೆಯನ್ನು ಮಾಡಬಹುದು.

**XXXXX**

**53. ಚೆಕ್‌ಪೋಸ್ಟ್‌ಗಳ ಸ್ಥಾಪನೆ ಮತ್ತು ಸಾಗಣೆಯಲ್ಲಿರುವ ಸರಕುಗಳ ಪರಿಶೀಲನೆ.–** (1) ರಾಜ್ಯದಲ್ಲಿನ ಯಾವುದೇ ಸ್ಥಳ ಅಥವಾ ಸ್ಥಳಗಳಲ್ಲಿ, ಈ ಅಧಿನಿಯಮದ ಅಡಿಯಲ್ಲಿ ತೆರಿಗೆಯನ್ನು ತಪ್ಪಿಸುವುದನ್ನು ತಡೆಹಿಡಿಯುವ ಅಥವಾ ಪ್ರತಿಬಂಧಿಸುವ ದೃಷ್ಟಿಯಿಂದ ರಾಜ್ಯ ಸರ್ಕಾರ ಅಥವಾ ಆಯುಕ್ತನು ಅವಶ್ಯಕವೆಂದು ಪರಿಗಣಿಸಿದಲ್ಲಿ ಅದು ಅಥವಾ ಅವನು, ಅಧಿಸೂಚಿಸಬಹುದಾದಂತೆ ಅಂಥ ಸ್ಥಳ ಅಥವಾ ಸ್ಥಳಗಳಲ್ಲಿ ಚೆಕ್‌ಪೋಸ್ಟ್‌ನ್ನು ಅಥವಾ ಸುಂಕದ ಕಟ್ಟೆಯನ್ನು ಅಥವಾ ಅವೆರಡನ್ನು ಸ್ಥಾಪಿಸುವಂತೆ ಅಧಿಸೂಚನೆಯ ಮೂಲಕ, ನಿರ್ದೇಶಿಸಬಹುದು.

(2) ಒಂದು ಸರಕು ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯ ಮಾಲೀಕ ಅಥವಾ ಪ್ರಭಾರ ಹೊಂದಿದ ವ್ಯಕ್ತಿಯು,–

(ಎ) ತನ್ನ ಜೊತೆಯಲ್ಲಿ ಸಂದರ್ಭಾನುಸಾರ ಸರಕು ವಾಹನದ ದಾಖಲೆ, ಟ್ರಿಪ್‌ಶೀಟ್ ಅಥವಾ ಲಾಗ್ ಪುಸ್ತಕವನ್ನು ಒಯ್ಯತಕ್ಕದ್ದು; ಮತ್ತು

(ಬಿ) ಸರಕುಗಳ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯಲ್ಲಿ ಸಾಗಿಸುತ್ತಿರುವ ಸರಕುಗಳಿಗೆ ಸಂಬಂಧಪಟ್ಟಂತೆ, ನಿಯಮಿಸಬಹುದಾದಂಥ ಅಥವಾ ಆಯುಕ್ತರು ಅಧಿಸೂಚಿಸಬಹುದಾದಂತೆ ದಸ್ತಾವೇಜುಗಳನ್ನು ತನ್ನ ಜೊತೆಯಲ್ಲಿ ತೆಗೆದುಕೊಂಡು ಒಯ್ಯತಕ್ಕದ್ದು; ಮತ್ತು

(ಸಿ) ತಾನು ಹೋಗಬೇಕಾದ ಸ್ಥಳಕ್ಕೆ ಸರಕಿನ ಸಾಗಣೆಯು ರಾಜ್ಯದಲ್ಲಿನ ಯಾವ ಸ್ಥಳದಿಂದ ಪ್ರಾರಂಭವಾಗುತ್ತದೋ ಆ ಸ್ಥಳದಿಂದ ಸಾಧಾರಣವಾಗಿ ಸಾಗುವ ಮಾರ್ಗದಲ್ಲಿ ಇರುವಂಥ ಮೊದಲ ಚೆಕ್‌ಪೋಸ್ಟ್‌ನಲ್ಲಿ ಅಥವಾ ಸುಂಕದ ಕಟ್ಟೆಯಲ್ಲಿ ಸದರಿ ಚೆಕ್‌ಪೋಸ್ಟಿನ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಯಾವೊಬ್ಬ ಅಧಿಕಾರಿಯ ಅಥವಾ ಇದಕ್ಕಾಗಿಯೇ ರಾಜ್ಯ ಸರ್ಕಾರದಿಂದ ಅಥವಾ ಆಯುಕ್ತರಿಂದ ಪ್ರಾಧಿಕೃತನಾಗಬಹುದಾದ ಯಾವೊಬ್ಬ ಇತರ ಅಧಿಕಾರಿಯ ಎದುರಿಗೆ ವರದಿ ಮಾಡಿಕೊಳ್ಳತಕ್ಕದ್ದು ಮತ್ತು (ಎ) ಮತ್ತು (ಬಿ) ಖಂಡಗಳಲ್ಲಿ ಉಲ್ಲೇಖಿಸಲಾದ ದಸ್ತಾವೇಜುಗಳನ್ನು ಹಾಜರುಪಡಿಸತಕ್ಕದ್ದು ಮತ್ತು ಅದರ ಮೇಲೆ ಅಂಥ ಅಧಿಕಾರಿಯ ಮೊಹರನ್ನು ಪಡೆಯತಕ್ಕದ್ದು ಮತ್ತು ಮಾರಾಟದ ಬಿಲ್ಲಿಗೆ ಸಂಬಂಧಪಟ್ಟಂತೆ ಅದರ ಒಂದು ಪ್ರತಿಯನ್ನು ನೀಡತಕ್ಕದ್ದು ಮತ್ತು ರವಾನೆ ಚೀಟಿಗೆ ಸಂಬಂಧಪಟ್ಟಂತೆ ಮೂಲಪ್ರತಿಯೆಂದು ಗುರುತಿಸಲಾದ ಒಂದು ಪ್ರತಿಯನ್ನು ಅಂಥ ಅಧಿಕಾರಿಗೆ ನೀಡತಕ್ಕದ್ದು ಮತ್ತು ಇನ್ನೊಂದು ಪ್ರತಿಯನ್ನು ಸರಕುಗಳ ಸಾಗಣೆಯು ಕೊನೆಗೊಳ್ಳುವವರೆಗೆ ತನ್ನಲ್ಲಿ ಉಳಿಸಿಕೊಳ್ಳತಕ್ಕದ್ದು; ಮತ್ತು

(ಡಿ) ರಾಜ್ಯದ ಗಡಿಯನ್ನು ಪ್ರವೇಶಿಸಿದ ಮೇಲೆ, ಅಲ್ಲಿರುವ ಮೊದಲನೇ ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯಲ್ಲಿ ವರದಿ ಮಾಡಿಕೊಳ್ಳತಕ್ಕದ್ದು ಮತ್ತು ರಾಜ್ಯದ ಗಡಿಯನ್ನು ಬಿಡುವಾಗ ಕೊನೆಯಲ್ಲಿ ಸ್ಥಾಪನೆಗೊಂಡ ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯಲ್ಲಿ ವರದಿ ಮಾಡಿಕೊಳ್ಳತಕ್ಕದ್ದು ಮತ್ತು ಚೆಕ್‌ಪೋಸ್ಟ್‌ನ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಯಾವೊಬ್ಬ ಅಧಿಕಾರಿಯ ಅಥವಾ ಈ ಬಗ್ಗೆ ರಾಜ್ಯ ಸರ್ಕಾರದಿಂದ ಅಥವಾ ಆಯುಕ್ತರಿಂದ ಪ್ರಾಧಿಕೃತನಾಗಿರಬಹುದಾದ ಯಾವೊಬ್ಬ ಇತರೆ ಅಧಿಕಾರಿಯ ಎದುರಿಗೆ, ಸರಕುಗಳ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯಲ್ಲಿ ತೆಗೆದುಕೊಂಡು ಹೋಗುವ ಸರಕುಗಳಿಗೆ ಸಂಬಂಧಪಟ್ಟಂತೆ ನಿಯಮಿಸಬಹುದಾದಂತೆ ಅಂಥ ವಿವರಗಳನ್ನೊಳಗೊಂಡ ಒಂದು ಘೋಷಣಾ ಪತ್ರವನ್ನು ನೀಡತಕ್ಕದ್ದು; ಮತ್ತು

(ಇ) ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಅಧಿಕಾರಿಯು ಅಥವಾ ಮೇಲೆ ಹೇಳಲಾದಂತೆ ಪ್ರಾಧಿಕೃತನಾದ ಅಧಿಕಾರಿಯು ಅಗತ್ಯಪಡಿಸಬಹುದಾದಷ್ಟು ಸಮಯದವರೆಗೆ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯಲ್ಲಿನ ಸರಕುಗಳನ್ನು ಪರೀಕ್ಷಿಸಲು ಮತ್ತು ಸರಕುಗಳನ್ನು ತೆಗೆದುಕೊಂಡು ಹೋಗುತ್ತಿರುವುದಕ್ಕೆ ಸಂಬಂಧಪಟ್ಟಂತೆ ಅಂಥ ಚಾಲಕನ ಅಥವಾ ಪ್ರಭಾರದಲ್ಲಿರುವ ಇತರ ವ್ಯಕ್ತಿಯ ಸ್ವಾಧೀನದಲ್ಲಿರುವ ಎಲ್ಲ ದಾಖಲೆಗಳನ್ನು ಪರಿಶೀಲಿಸಲು ಸಂದರ್ಭಾನುಸಾರ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯನ್ನು ನಿಲ್ಲಿಸತಕ್ಕದ್ದು ಮತ್ತು ಹಾಗೆ ಅಗತ್ಯಪಡಿಸಲಾದಲ್ಲಿ, ತನ್ನ ಹೆಸರು ಮತ್ತು ವಿಳಾಸ ಮತ್ತು ವಾಹನದ ಅಥವಾ ನಾವೆಯ, ಹಡಗಿನ ಅಥವಾ ಅಂಥದೇ ನೌಕೆಯ ಮಾಲೀಕನ ಹೆಸರು ಮತ್ತು ವಿಳಾಸವನ್ನು ನೀಡತಕ್ಕದ್ದು.

**XXXXX**

(12) (ಎ) ಚೆಕ್‌ಪೋಸ್ಟ್‌ನ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಅಧಿಕಾರಿ ಅಥವಾ ಯಾವೊಬ್ಬ ಇತರ ಅಧಿಕಾರಿಯು (2)ನೇ ಉಪ-ಪ್ರಕರಣದ ಉಪಬಂಧಗಳ ಯಾವುದೇ ಉಲ್ಲಂಘನೆಗೆ ಅಥವಾ ಪಾಲಿಸದಿರುವುದಕ್ಕೆ ಸಂಬಂಧಪಟ್ಟಂತೆ, ಸಾಕಷ್ಟು ಕಾರಣಗಳನ್ನು ಒದಗಿಸದಿದ್ದಾಗ ಈ ಮುಂದಿನಂತೆ ದಂಡವನ್ನು ವಿಧಿಸಬಹುದು, ಅದು,-

(i) ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿತನಾದ ಒಬ್ಬ ವ್ಯಾಪಾರಿಯು ತಾನು ಸರಕುಗಳನ್ನು ಕಳುಹಿಸುವವನು ಅಥವಾ ಸರಕುಗಳನ್ನು ಪಡೆಯುವವನು ಎಂಬುದಾಗಿ ಅವನು ಒಪ್ಪಿದಲ್ಲಿ, (2)ನೇ ಉಪ-ಪ್ರಕರಣದ (ಸಿ) ಖಂಡದ ಅಥವಾ (ಡಿ) ಖಂಡದ ಉಲ್ಲಂಘನೆಯಲ್ಲಿ ಸಾಗಣೆಯಲ್ಲಿರುವ ಸರಕುಗಳಿಗೆ ಸಂಬಂಧಪಟ್ಟಂತೆ ವಿಧಿಸಬಹುದಾದ ದಂಡವು ಅವುಗಳಿಗೆ ವಿಧಿಸಬಹುದಾದ ತೆರಿಗೆ ಮೊಬಲಗಿಗಿಂತ ಕಡಿಮೆ ಇರತಕ್ಕದ್ದಲ್ಲ ಆದರೆ, ಅಂಥ ತೆರಿಗೆಯ ಮೊಬಲಗಿನ ಒಂದೂವರೆ ಪಟ್ಟನ್ನು ಮೀರತಕ್ಕದ್ದಲ್ಲ;

(ii) (1)ನೇ ಬಾಬಿನ ಅಡಿಯಲ್ಲಿ ಬರುವವುಗಳ ಹೊರತಾದ ಸಂದರ್ಭಗಳಲ್ಲಿ, ಇತರ ಸಂದರ್ಭಗಳಲ್ಲಿ, ವಿಧಿಸಬಹುದಾದ ದಂಡವು, ಸಾಗಣೆಯಲ್ಲಿರುವ ಸರಕುಗಳ ಸಂಬಂಧದಲ್ಲಿ ವಿಧಿಸಬಹುದಾದ ತೆರಿಗೆಯ ಮೊಬಲಗಿನ ಎರಡರಷ್ಟಕ್ಕೆ ಕಡಿಮೆ ಇರತಕ್ಕದ್ದಲ್ಲ, ಆದರೆ, ತೆರಿಗೆಯ ಮೊಬಲಗಿನ ಮೂರುಪಟ್ಟನ್ನು ಮೀರತಕ್ಕದ್ದಲ್ಲ.

**XXXXX**

**54. ರಾಜ್ಯದ ಮೂಲಕ ರಸ್ತೆ ಮಾರ್ಗವಾಗಿ ಸರಕುಗಳ ಸಾಗಣೆ ಮತ್ತು ಸಾಗಣೆ ಪಾಸ್ ನೀಡುವುದು.**- (1) ಈ ಅಧಿನಿಯಮದ ಅಡಿಯಲ್ಲಿ ತೆರಿಗೆಗೆ ಗುರಿಯಾಗುವ ಸರಕುಗಳನ್ನು ಕೊಂಡೊಯ್ಯುತ್ತಿರುವ ಒಂದು ವಾಹನವು,

(ಎ) ರಾಜ್ಯದ ಹೊರಗಿನ ಯಾವುದೇ ಸ್ಥಳದಿಂದ ಮತ್ತು ರಾಜ್ಯದ ಹೊರಗಿನ ಯಾವುದೇ ಸ್ಥಳಕ್ಕಾಗಿ ರಾಜ್ಯದ ಮೂಲಕ ಹಾದು ಹೋದರೆ; ಅಥವಾ

(ಬಿ) ದೇಶದ ಹೊರಗಿನ ಯಾವುದೇ ಸ್ಥಳದಿಂದ ರಾಜ್ಯಕ್ಕೆ ಆಮದು ಮಾಡಿಕೊಂಡರೆ ಮತ್ತು ಅಂಥ ಸರಕುಗಳನ್ನು ರಾಜ್ಯದ ಹೊರಗಿನ ಯಾವುದೇ ಸ್ಥಳಕ್ಕೆ ಕೊಂಡೊಯ್ದರೆ;

- ಅಂಥ ವಾಹನದ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ಯಾವೊಬ್ಬ ಇತರ ವ್ಯಕ್ತಿಯು ಅವಶ್ಯಕವಿರುವ ಮಾಹಿತಿಯನ್ನು ಒದಗಿಸತಕ್ಕದ್ದು ಮತ್ತು ನಿಯಮಿಸಬಹುದಾದ ಅಂಥ ವಿವರಗಳನ್ನು ಒಳಗೊಂಡ ಒಂದು ಸಾಗಣೆ ಪಾಸನ್ನು ದ್ವಿಪ್ರತಿಯಲ್ಲಿ, ಅವನು ರಾಜ್ಯದೊಳಗೆ ಪ್ರವೇಶಿಸಿದ ತರುವಾಯ ಅಥವಾ ಸಂದರ್ಭಾನುಸಾರ ರಾಜ್ಯದಿಂದ ಸಾಗಣೆಯು ಪ್ರಾರಂಭಗೊಂಡ ತರುವಾಯ ಮೊದಲನೇ ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯ ಅಥವಾ ಸರಕು ವಾಹನವು ರಾಜ್ಯದೊಳಕ್ಕೆ ಪ್ರವೇಶಿಸಿದ ತರುವಾಯ ತಡೆದು ನಿಲ್ಲಿಸಿದ ಮೇಲೆ ಅಥವಾ ಸಂದರ್ಭಾನುಸಾರ ಸಾಗಣೆ ಪ್ರಾರಂಭಗೊಂಡ ತರುವಾಯ, 53ನೇ ಪ್ರಕರಣದ ಉದ್ದೇಶಗಳಿಗಾಗಿ ಪ್ರಾಧಿಕೃತನಾದ ಅಧಿಕಾರಿಯಿಂದ ಪಡೆದುಕೊಳ್ಳತಕ್ಕದ್ದು.

**XXXXX**

**62. ಅಪೀಲುಗಳು.**- (1) ನಿಯಮಿಸಲಾದ ಪ್ರಾಧಿಕಾರವು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಹೊರಡಿಸಿದ ಯಾವುದೇ ಆದೇಶದಿಂದ ಅಥವಾ ವ್ಯವಹರಣೆಗಳಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಅವುಗಳನ್ನು ಆಕ್ಷೇಪಿಸಿ ಅಪೀಲು ಪ್ರಾಧಿಕಾರಕ್ಕೆ ಅಪೀಲು ಮಾಡಿಕೊಳ್ಳಬಹುದು.

**XXXXX**

(4) (ಎ) ತೆರಿಗೆ ನಿರ್ಧರಣೆಯ ಆದೇಶದ ವಿರುದ್ಧ ಯಾವುದೇ ಅಪೀಲನ್ನು ಅದರೊಂದಿಗೆ ಅಪೀಲಿನಲ್ಲಿ ವಿವಾದಿಸದೇ ಇರುವ ತೆರಿಗೆ ಮತ್ತು ದಂಡ ಸಂದಾಯದ ಬಗ್ಗೆ ತೃಪ್ತಿಕರ ರುಜುವಾತು ಇದ್ದ ಹೊರತು ಅಪೀಲು ಪ್ರಾಧಿಕಾರಿಯು ಪುರಸ್ಕರಿಸತಕ್ಕದ್ದಲ್ಲ;

(ಬಿ) ಯಾವ ಆದೇಶದ ಅಥವಾ ವ್ಯವಹರಣೆಗಳ ವಿರುದ್ಧ ಅಪೀಲನ್ನು ಸಲ್ಲಿಸಲಾಗಿದೆಯೋ ಆ ಆದೇಶಕ್ಕೆ ಅಥವಾ ವ್ಯವಹರಣೆಗಳಿಗೆ ಅನುಸಾರವಾಗಿ ತೆರಿಗೆ ಅಥವಾ ಇತರ ಮೊಬಲಗನ್ನು ಸಂದಾಯ ಮಾಡತಕ್ಕದ್ದು;

(ಸಿ) (i) ಅಪೀಲು ಪ್ರಾಧಿಕಾರಿಯು, ತನ್ನ ವಿವೇಚನಾನುಸಾರ, ಅಪೀಲುದಾರನು ನಿಯಮಿಸಲಾದ ಅಪೀಲಿನ ನಮೂನೆಯ ಜೊತೆಯಲ್ಲಿ ತೆರಿಗೆಯ ಅರ್ಧದಷ್ಟನ್ನು ಸಂದಾಯ ಮಾಡಿದ್ದರೆ, ಇನ್ನುಳಿದ ಅರ್ಧದಷ್ಟು ತೆರಿಗೆಯ ಸಂದಾಯಕ್ಕೆ ತಡೆ ನೀಡಬಹುದು.

(ii) ಯಾವುದೇ ತೆರಿಗೆಯ ಅಥವಾ ಇತರ ಮೊಬಲಗಿನ ವಸೂಲಿಯ ವ್ಯವಹರಣೆಗಳನ್ನು ತಡೆಯುವುದಕ್ಕಾಗಿ ಅರ್ಜಿದಾರನು ಸಲ್ಲಿಸಿದ ಅರ್ಜಿಯನ್ನು ಅಪೀಲು ಪ್ರಾಧಿಕಾರವು ಅಂಥ ಅರ್ಜಿಯ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ ವಿಲೆ ಮಾಡದಿದ್ದಲ್ಲಿ, ಅಂಥ ತೆರಿಗೆಯ ಅಥವಾ ಇತರ ಮೊಬಲಗಿನ ವಸೂಲಿಯ ವ್ಯವಹರಣೆಗಳನ್ನು ತಡೆಯುವ ಆದೇಶವನ್ನು ವಿವಾದಿತ ತೆರಿಗೆಯ ಅರ್ಧದಷ್ಟು ಸಂದಾಯ ಮಾಡುವ ಮತ್ತು ಅಂಥ ತೆರಿಗೆಯ ಇನ್ನುಳಿದ ಅರ್ಧದಷ್ಟನ್ನು ಅಥವಾ ಇತರ ಮೊಬಲಗನ್ನು ಮುಂದಿನ ಹದಿನೈದು ದಿನಗಳ ಅವಧಿಯೊಳಗೆ ಸಲ್ಲಿಸುವ ಬಗ್ಗೆ ತೆರಿಗೆ ನಿರ್ಧರಣಾ ಪ್ರಾಧಿಕಾರಕ್ಕೆ ತೃಪ್ತಿಕರವಾಗುವಂತೆ ಸಾಕಷ್ಟು ಭದ್ರತೆ ನೀಡುವ ಷರತ್ತಿಗೆ ಒಳಪಟ್ಟು ಅಪೀಲು ಪ್ರಾಧಿಕಾರವು ತಡೆಯಾಜ್ಞೆ ನೀಡಿದೆಯೆಂದು ಭಾವಿಸತಕ್ಕದ್ದು.

(ಡಿ) ಮೇಲಿನ (1)ನೇ ಉಪ ಪ್ರಕರಣದ ಅಡಿಯಲ್ಲಿಯ ಅಪೀಲಿನ ಸಂಬಂಧದಲ್ಲಿಯ ಯಾವುದೇ ವ್ಯವಹರಣೆಯಲ್ಲಿಯ ಯಾವುದೇ ತೆರಿಗೆ ಅಥವಾ ಇತರ ಮೊಬಲಗಿನ ವಸೂಲಾತಿಯ ವ್ಯವಹರಣೆಯನ್ನು ತಡೆಯುವ ಆಜ್ಞೆಯನ್ನು ಹೊರಡಿಸಲಾಗಿದ್ದರೆ ಅಪೀಲು ಪ್ರಾಧಿಕಾರವು ಅಂಥ ಆದೇಶದ ದಿನಾಂಕದಿಂದ ಒಂದುನೂರಾ ಇಪ್ಪತ್ತು ದಿನಗಳ ಅವಧಿಯ ಒಳಗೆ ಅಪೀಲನ್ನು ವಿಲೆ ಮಾಡತಕ್ಕದ್ದು.

**XXXXX**

## ಎರಡನೇ ಅನುಸೂಚಿ

### ಶೇಕಡಾ ಒಂದರ ದರದಲ್ಲಿ ತೆರಿಗೆಗೆ ಗುರಿಯಾಗತಕ್ಕ ಸರಕುಗಳು

[4(1)(ಎ)(**i**)ನೇ ಪ್ರಕರಣ]

| **ಕ್ರಮ ಸಂಖ್ಯೆ** | **ಸರಕುಗಳ ವಿವರ** |
|---|---|
| 1 | 2 |
| 1. | ಚಿನ್ನ ಅಥವಾ ಬೆಳ್ಳಿ ಗಟ್ಟಿಗಳು ಹಾಗೂ ನಾಣ್ಯಗಳು |
| 2. | ಅಮೂಲ್ಯ ಅಥವಾ ಅರೆ ಅಮೂಲ್ಯ ಹರಳುಗಳನ್ನು ಅಳವಡಿಸಿರುವ ಅಥವಾ ಇಲ್ಲದಿರುವ ಚಿನ್ನ, ಬೆಳ್ಳಿ ಮತ್ತು ಇತರ ಬೆಲೆಬಾಳುವ ಲೋಹಗಳ ಆಭರಣಗಳು ಮತ್ತು ವಸ್ತುಗಳು. |
| 3. | ಅಮೂಲ್ಯ ಮತ್ತು ಅರೆ ಅಮೂಲ್ಯ ಹರಳುಗಳು. |

**XXXXX**

## ಮೂರನೇ ಅನುಸೂಚಿ

[4(1)(ಎ)(**ii**)ನೇ ಪ್ರಕರಣ]

| **ಕ್ರಮ ಸಂಖ್ಯೆ** | **ಸರಕುಗಳ ವಿವರ** |
|---|---|
| 1 | 2 |

**XXXXX**

5. ಪ್ರೆಷರ್ ಕುಕ್ಕರು ಮತ್ತು ಪ್ಯಾನ್‌ಗಳೂ ಸೇರಿದಂತೆ ಅಡಿಗೆ ತಯಾರಿಸಲು ಉಪಯೋಗಿಸುವ ಎಲ್ಲಾ ಪಾತ್ರೆಗಳು ಆದರೆ ಅಡಿಗೆ ಮನೆಯಲ್ಲಿ ಬಳಸುವ ಅಥವಾ ಗೃಹೋಪಯೋಗಿಯಾಗಿ ಬಳಸುವ ಸ್ಟೋವ್‌ಗಳು, ಟ್ರೇಗಳು, ಬಾಸ್ಕೆಟ್‌ಗಳು ಮತ್ತು ಇತರ ಕಂಟೇನರುಗಳು, ಪೀಠೋಪಕರಣ, ಸಲಕರಣೆಗಳು, ಅಳವಡಿಕೆಗಳು ಮತ್ತು ಸಲಕರಣೆಗಳು ಹಾಗೂ ಬೆಲೆಬಾಳುವ ಲೋಹಗಳಿಂದ ಮಾಡಿದ ಪಾತ್ರೆಗಳು ಹೊರತುಪಡಿಸಿದಂತೆ.

**XXXXX**

30. ಕೇಂದ್ರ ಮಾರಾಟ ತೆರಿಗೆ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ 74) 14ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಘೋಷಿತ ಸರಕುಗಳು.

**XXXXX**

**ಆರನೇ ಅನುಸೂಚಿ**

[ಪ್ರಕರಣ 4(1) (ಸಿ)]

| ಕ್ರಮ ಸಂಖ್ಯೆ | ಕಾಮಗಾರಿಗಳ ಕರಾರಿನ ವಿವರಣೆ | ತೆರಿಗೆಯ ದರ |
|---|---|---|
| 1 | 2 | 3 |
| | XXXXX | |
| 7 | ಅಮೂಲ್ಯ ಅಥವಾ ಅರೆ ಅಮೂಲ್ಯ ಹರಳುಗಳನ್ನು ಹುದುಗಿಸಿರಲಿ ಅಥವಾ ಹುದುಗಿಸಿರದಿರಲಿ ಚಿನ್ನದ, ಬೆಳ್ಳಿಯ ಮತ್ತು ಇತರೆ ಅಮೂಲ್ಯ ಲೋಹದ ಒಡವೆಗಳು ಮತ್ತು ವಸ್ತುಗಳ ತಯಾರಿಕೆ ಅಥವಾ ಸಂಸ್ಕರಣ ಮತ್ತು ಸರಬರಾಜು. | ಶೇಕಡಾ ನಾಲ್ಕು |
| | XXXXX | |
| 12 | ಪ್ಲಂಬಿಂಗ್‌ಗಾಗಿ, ಚರಂಡಿಗಾಗಿ ಮತ್ತು ಅಂಥ ಕಾರ್ಯಗಳಿಗಾಗಿ ಹೊರತು ಇತರೆ ಉದ್ದೇಶಗಳಿಗಾಗಿ ಸ್ಟೀಲ್ ಪೈಪ್‌ಗಳನ್ನು ಒದಗಿಸುವುದು ಮತ್ತು ಜೋಡಿಸುವುದು. | ಶೇಕಡಾ ನಾಲ್ಕು |
| | XXXXX | |
| 23 | ಮೇಲಿನ ಒಂದು ಅಥವಾ ಹೆಚ್ಚಿನ ಪ್ರವರ್ಗಗಳೊಂದಿಗೆ ಸಂಯೋಜಿತ ಕರಾರುಗಳೂ ಸೇರಿದಂತೆ ಮೇಲಿನ ಯಾವುದೇ ಪ್ರವರ್ಗಗಳಲ್ಲಿ ನಿರ್ದಿಷ್ಟ ಪಡಿಸದಿರುವ ಇತರ ಎಲ್ಲಾ ಕಾಮಗಾರಿಗಳ ಕರಾರು. | ಶೇಕಡಾ ಹದಿಮೂರುವರೆ |
| | XXXXX | |

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### NINTH SESSION

## THE KARNATAKA VALUE ADDED TAX (AMENDMENT) BILL, 2011

### (L.A. Bill No. 14 of 2011)

A Bill further to amend the Karnataka Value Added Tax Act, 2003.

Whereas it is expedient further to amend the Karnataka Value Added Tax Act, 2003 (Karnataka Act 32 of 2004) for the purposes hereinafter appearing;

Be it enacted by the Karnataka State Legislature in the Sixty second year of the Republic of India, as follows.-

**1. Short title and commencement.-** (1) This Act may be called the Karnataka Value Added Tax ( Amendment) Act, 2011.

(2) It shall come into force with effect from the first day of April, 2011.

**2. Amendment of section 4.-** In the Karnataka Value Added Tax Act, 2003 (Karnataka Act 32 of 2004) (hereinafter referred to as the principal Act), in section 4, in sub-section (1),-

(i) in clause (a), for sub-clause (ii), the following shall be substituted, namely:-

"(ii) Third Schedule, at the rate of five per cent, and " ;

(ii) for clause (b), the following shall be substituted, namely:-

"(b) in respect of.-

(i) declared goods as specified in Section 14 of the Central Sales Tax Act, 1956 (Central Act 74 of 1956) at the maximum rate specified for such goods under Section 15 of the said Act;

(ii) cigarettes, cigars, gutkha and other manufactured tobacco at the rate of fifteen per cent;

(iii) other goods at the rate of fourteen per cent."

**3. Substitution of section 21-** For section 21 of the principal Act, the following shall be substituted, namely:-

"**21. Reimbursement of tax.-** Tax collected under this Act on such class of purchases as may be prescribed, made by specialised agencies of the Untited Nations Organisation, Multilateral Financial Institutions and Organisations notified under the United Nations (Privileges and Immunities) Act, 1947 (Central Act 46 of 1947) and Consulates or Embassies of any other country but excluding consulates or embassies as may be notified shall be reimbursed, in such manner and subject to such conditions as may be prescribed."

**4. Amendment of section 25.-** In section 25 of the principal Act, after sub-section (1), the following proviso shall be inserted, namely:-

"Provided that the Commissioner may notify the website in which an application shall be made electronically."

**5. Amendment of section 31.-** In section 31 of the principal Act,-

(i) in sub-section (4), for the words "sixty lakh rupees", the words "one hundred lakh rupees" shall be substituted;

(ii) sub-section (6) shall be omitted.

**6. Amendment of section 37.-** In section 37 of the principal Act, in sub-section (1), for the words "one and a quarter per cent", the words "one and one half per cent" shall be substituted.

**7. Amendment of section 40.-** In section 40 of the principal Act,-

(i) in sub-section (1),-

(a) in clause (a), for the words "five years", the words "four years" shall be substituted;

(b) the following proviso shall be inserted at the end, namely:-

"Provided that an assessment or re-assessment relating to any tax period ending 31st day of March, 2007 shall be made within a period of five years after the end of the prescribed tax period."

(ii) in sub-section (2), for the words "five years was a reference to ten years", the words "four years was a reference to eight years" shall be substituted.

**8. Amendment of section 53.-** In section 53 of the principal Act, in sub-section (12), after clause (a), the following proviso shall be inserted, namely:-

"Provided that in respect of any goods on which the rate of tax leviable is less than four per cent, the penalty leviable under sub-clause (ii) shall be equivalent to five times the amount of tax leviable."

**9. Amendment of section 54.-** In section 54 of the principal Act, after sub-section (1), the following proviso shall be inserted, namely:-

" Provided that the Commissioner may notify the website in which the necessary information shall be furnished by the driver or any other person-in-charge of the vehicle."

**10. Amendment of section 62.-** In section 62 of the principal Act, in sub-section (4), in clause (d), for the words "one hundred twenty days", the words "two hundred forty days" shall be substituted.

**11. Amendment of the Second Schedule.-** In the Second Schedule to the principal Act, the entries relating to serial numbers 2 and 3 shall be omitted.

**12. Amendment of the Third Schedule.-** In the Third Schedule to the principal Act,

(i) in the entries relating to serial number 5, the words "used for cooking food" shall be omitted;

(ii) the entries relating to serial number 30 shall be omitted.

**13. Amendment of the Sixth Schedule.-** In the Sixth Schedule to the principal Act,-

(i) the entries relating to serial number 7, shall be omitted.

(ii) in the entries relating to serial number 12, in column 3, for the words "Four per cent", the words "At the maximum rate specified for declared goods in section 15 of the Central Sales Tax Act, 1956 (Central Act 74 of 1956)" shall be substituted;

(iii) in the entries relating to serial number 23, in column 3, for the words "Thirteen and one half per cent", the words "Fourteen per cent" shall be substituted.

## STATEMENT OF OBJECTS AND REASONS

It is considered necessary to amend the Karnataka Value Added Tax Act, 2003 to give effect to the proposals made in the Budget and matters connected therewith and specifically to, empower the Commissioner of Commercial Taxes to,

(i) notify the website in which an application for registration may be made by the dealer so as to make the procedure of the issue of registration simple and easy;

(ii) notify the website in which information in respect of transit of goods by road through the State may be entered into so as to make the issue of transit pass simple and detection of non-compliance easy.

Certain consequential and incidental amendments and other amendments to rationalise certain current provision are also made.

Hence the Bill.

## MEMORANDUM REGARDING DELEGATED LEGISLATION

**CLAUSE 3-** Section 21 sought to be substituted under Clause 3 empowers the State Government to make rules prescribing the class of purchases of goods on which the benefit of reimbursement of tax paid can be availed by the specified agencies and prescribing the manner and conditions for claiming such reimbursement of tax on purchases and also to notify the consulates and embassies of the countries which would not be eligible for the benefit of reimbursement of tax paid on their purchases of goods.

The proposed delegation of Legislative power is normal in character.

**B.S. YEDDYURAPPA**
Chief Minister and
Minister for Finance

**S.B. PATIL**
Secretary
Karnataka Legislative Assembly

## FINANCIAL MEMORANDUM

There is no extra expenditure involved by the proposed measure.

## ANNEXURE

### EXTRACT OF THE KARNATAKA VALUE ADDED TAX ACT, 2003

### (KARNATAKA ACT No. 32 OF 2004)

**XXXXX**

**4. Liability to tax and rates thereof.-** (1) Every dealer who is or is required to be registered as specified in Sections 22 and 24, shall be liable to pay tax, on his taxable turnover,

(1) in respect of goods mentioned in,-

(i) Second Schedule, at the rate of one per cent,

(ii) Third Schedule, at the rate of four per cent in respect of goods specified in serial number 30 and five per cent in respect of other goods, and

(iii) Fourth Schedule, at the rate of twenty per cent.

(b) in respect of.-

(i) cigarettes, cigars, gutkha and other manufactured tobacco at the rate of fifteen per cent;

(ii) other goods, at the rate of thirteen and one half per cent.

**XXXXX**

**21. Reimbursement of tax.-** Tax collected under this Act on purchases made by specialised agencies of the United Nations Organisation and Consulates or Embassies of any other country but excluding consulates or embassies of such countries as may be notified, shall be reimbursed in such manner and subject to such conditions as may be prescribed.

**XXXXX**

**25. Registration.-** (1) The form of application to register under Section 22 or 23, the time and manner of making application, and the fee, payable shall be as may be prescribed.

**XXXXX**

**31. Accounts.-** (1) Every registered dealer and every dealer liable to pay tax under this Act shall keep and maintain a true and correct account, in Kannada or English or Hindi or in such other language as the Government may, by notification, specify, of all his purchases, receipts, sales, other disposals, production, manufacture and stock showing the values of goods subject to each rate of tax under this Act including input tax paid and output tax payable.

**XXXXX**

(4) Every dealer whose total turnover in a year exceeds sixty lakh rupees shall have his accounts audited by a Chartered Accountant or a Cost Accountant or a Tax Practitioner subject to such conditions and such limits as may be prescribed and shall submit to the prescribed authority a copy of the audited statement of accounts and prescribed documents in the prescribed manner.

Provided that every dealer whose total turnover for the year ending Thirty first day of March, 2010 exceeds forty lakh rupees shall have his accounts audited.

**XXXXX**

(6) Every registered dealer and every dealer including owner of a land, liable to get registered under this Act, entering into a written agreement during any tax period for executing, partly or wholly, a works contract of construction of a building or other civil work either by himself or through another, shall submit a copy of such agreement within the end of the subsequent tax period to the prescribed authority to whom he is required to submit a return.

**XXXXX**

**37. Rate of interest.-** (1) The rate of simple interest payable under Section 36 shall be one and a quarter per cent per month:

(a) from the date the tax had become payable to the date of its payment or to the date of any assessment under this Act, whichever is earlier; and

(b) from the date on which any amount payable under this Act was due.

**XXXXX**

**40. Period of limitation for assessment.-** (1) An assessment under Section 38 or re-assessment under Section 39 of an amount of tax due for any prescribed tax period shall not be made after the following time limits.-

(a) five years after the end of the prescribed tax period; or

(b) three years after evidence of facts, sufficient in the opinion of the prescribed authority to justify making of the re-assessment, comes to its knowledge, whichever is later.

(2) If any tax is, not paid by a dealer who has failed to get registered though liable to do so or fraudulently evaded attracting punishment under-Section 79, an assessment or re-assessment may be made as if in sub-section (1) reference to five years was a reference to ten years.

**XXXXX**

**53. Establishment of check posts and inspection of goods in movement.- 53. Establishment of check posts and inspection of goods in movement.-** (1) If the Government or the Commissioner considers it necessary, with a view to prevent or check evasion of tax under this Act in any place or places in the State, it or he may, by notification, direct the establishment of a check post or the erection of a barrier, or both, at such place or places as may be notified.

(2) The owner or person in charge of a goods vehicle or a boat, ship or similar vessel shall:

(a) carry with him a goods vehicle record, a trip sheet or a log book, as the case may be; and

